(ಖಾಸಗಿ ಪ್ರಸಾರಕ್ಕಾಗಿ ಮಾತ್ರ)

# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

ಫೆಬ್ರವರಿ - 2016



ಶ್ರೀ ಗೋಪಾಲಕೃಷ್ಣ ಅಡಿಗ

# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ. 307, 2ನೇ ವಿಭಾಗ, 17ನೇ ಅಡ್ಡರಸ್ತೆ, 2ನೇ ವಿಭಾಗ,
ಆರ್.ಟಿ. ನಗರ, ಬೆಂಗಳೂರು - 560 032.
ಇ-ಮೇಲ್ : pcchadaga@hotmail.com

## ಪದಾಧಿಕಾರಿಗಳು :

ಗೌರವಾಧ್ಯಕ್ಷರು : ಶ್ರೀ ಎಸ್.ಆರ್. ವಿಜಯಶಂಕರ
ದೂರವಾಣಿ : 2346 7852

ಅಧ್ಯಕ್ಷರು : ಶ್ರೀ ಪಾ. ಚಂದ್ರಶೇಖರ ಚಡಗ
ದೂರವಾಣಿ : 2333 6822 / 93437 66994

ಉಪಾಧ್ಯಕ್ಷರು : ಶ್ರೀ ಬಿ.ವಿ. ಕೆದಿಲಾಯ
ದೂರವಾಣಿ : 2274 6186
ಡಾ. ಆರ್.ಆರ್. ಪಾಂಗಾಳ
ದೂರವಾಣಿ : 2333 0247 / 98454 05057

ಕಾರ್ಯದರ್ಶಿ : ಶ್ರೀ ಡಿ.ಎಚ್.ಎಂ. ವೀರ ಶೇಖರಸ್ವಾಮಿ
ದೂರವಾಣಿ : 2333 6209 / 98451 32136

ಜೊತೆ ಕಾರ್ಯದರ್ಶಿಗಳು : ಶ್ರೀ ಇಂದಿರಾ ಶರಣ್ ಜಂಬಲ್‌ದಿನ್ನಿ
ದೂರವಾಣಿ : 2363 3275
ಶ್ರೀ ಕೃಷ್ಣ ಪ್ರಸಾದ್ ಪಂಜಿಮೊಗರು
ದೂರವಾಣಿ : 99005 15197

ಕೋಶಾಧಿಕಾರಿ : ಶ್ರೀ ಚಂದ್ರಶೇಖರ ಕಾರಂತ
ದೂರವಾಣಿ : 94486 86862

## ಕಾರ್ಯಕಾರಿ ಸಮಿತಿ ಸದಸ್ಯರು :

ಶ್ರೀಮತಿ ರಾಧಾ ರಾಮಸ್ವಾಮಿ
ಡಾ। ನಿರ್ಮಲ ಪ್ರಭು
ಸಾ.ರಾ. ವಾರಂಬಳ್ಳಿ
ಸೀತಾರಾಮ ಭಟ್ ಪಿ.ಹೆಚ್.ಡಿ.
ಶ್ರೀಮತಿ ಅನುಪಮ ಸಂಜಯ
ರಾಮಚಂದ್ರ
ಜಯರಾಮ ಬಿ.ಎಸ್.
ಎಸ್. ಶೇಖರ್
ಶ್ರೀಮತಿ ಶಾಂತಕುಮಾರಿ
ಶ್ರೀಮತಿ ಶಶಿಕಲಾ ಆರ್.

ವಿಶೇಷ ಆಹ್ವಾನಿತರು : ಸಿ.ಆರ್. ಸತ್ಯ

ಸಂಪನ್ಮೂಲ ಸಮಿತಿಯ ಸದಸ್ಯರು : ವಿಜಯ ಸಮರ್ಥ, ಮಾಕನೂರು ಸೀತಾರಾಮ ಸುರೇಂದ್ರ ರವೀಂದ್ರಕುಮಾರ್ ಎಲ್.

ಹಣತೆಯ ವ್ಯವಸ್ಥಾಪಕ ಸಂಪಾದಕರು : ಪಾ. ಚಂದ್ರಶೇಖರ ಚಡಗ

# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

ಸಂಚಿಕೆ - 48 ಫೆಬ್ರವರಿ - 2016

## ಪರಿವಿಡಿ

## ಸಂಪಾದಕೀಯ...

ಪ್ರಿಯ ಓದುಗ,

ದಿನಾಂಕ 17-01-1993ರಲ್ಲಿ ಸ್ಥಾಪಿತವಾದ ಶಿವರಾಮ ಕಾರಂತ ವೇದಿಕೆ 23 ವಸಂತಗಳನ್ನು ಕಂಡು 24ನೆಯ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ಗಂಭೀರ ಸಾಹಿತ್ಯದ ಅಧ್ಯಯನವನ್ನೇ ತನ್ನ ಗುರಿಯಾಗಿಟ್ಟುಕೊಂಡಿರುವ ಸಂಸ್ಥೆಯ ಪಾಲಿಗೆ 23 ವರ್ಷಗಳ ನಿರಂತರ ಕಾಯಕ ಹೆಮ್ಮೆ ಪಟ್ಟುಕೊಳ್ಳಬಹುದಾದ ವಿಷಯವೇ ಸರಿ. ನಾವು ಕಂಡ ದೊಡ್ಡ ದೊಡ್ಡ ಕನಸುಗಳನ್ನು ಸಾಧಿಸಿಲ್ಲ ಎಂಬುವ ವ್ಯಥೆ ಇದ್ದರೂ 'ಆಗುವುದಿಷ್ಟು, ಆಗಬೇಕೆಂದಿರುವುದರ ರವಷ್ಟು' ಎಂಬ ಕವಿ ಗೋಪಾಲಕೃಷ್ಣ ಅಡಿಗರ ಮಾತು ನಮ್ಮನ್ನು ಎಚ್ಚರಿಸುತ್ತಲೇ ಇರುತ್ತದೆ. ಶಿವರಾಮ ಕಾರಂತರು ಯಶಸ್ಸು ಮತ್ತು ಸೋಲು ಎರಡನ್ನು ಒಂದೇ ರೀತಿ ಕಾಣಬೇಕು ಎನ್ನುತ್ತಾ ಬಂದವರು. ನಾವು ಕೆಲಸವನ್ನು ಮಾಡುತ್ತಾ ಆನಂದವನ್ನು ಪಡೆಯಬೇಕಲ್ಲದೆ ಬರಿಯ ಯಶಸ್ಸಿಗೆ ಬೀಗುವುದು ಸಲ್ಲದು ಎನ್ನುವುದನ್ನು ಅವರು ಹೇಳುತ್ತಿದ್ದರು. ನಾವು ನಡೆದು ಬಂದ ದಾರಿಯ ಕಡೆಗೊಮ್ಮೆ ನೋಡಿದರೆ ರವೀಂದ್ರನಾಥ ಟ್ಯಾಗೋರ್ ನಗರ ಮತ್ತು ಅದರ ಸುತ್ತಮುತ್ತಲಿನ ಸಾಹಿತ್ಯಾಸಕ್ತರ ಸಾಹಿತ್ಯದ ಅಭಿರುಚಿಯನ್ನೂ ಕಲಾಪ್ರೇಮಿಗಳ ಕಲಾಪ್ರೇಮವನ್ನು ಪೋಷಿಸುತ್ತಾ ಬಂದಿದ್ದೇವೆ.

ನಮ್ಮ ವೇದಿಕೆಯ ಗೌರವಾಧ್ಯಕ್ಷರಾದ ಶ್ರೀ ಎಸ್.ಆರ್. ವಿಜಯಶಂಕರ ಈಗ ಕರ್ನಾಟಕದ ಪ್ರಮುಖ ವಿಮರ್ಶಕರಲ್ಲೊಬ್ಬರೆಂದು ಪರಿಗಣಿಸಲ್ಪಟ್ಟಿದ್ದಾರೆ. ಅವರ 'ನಿಜಗುಣ' ಎಂಬ ವಿಮರ್ಶಾ ಕೃತಿಗೆ ಈ ವರ್ಷ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಿದೆ. ನಾವು ಪ್ರಕಟಿಸಿದ 'ಏಕಾದಶಿ ಉಪ್ವಾಸ' ಎನ್ನುವ ಮೊದಲ ಮುಖ್ಯ ಕೃತಿಯಿಂದ ಸಾಹಿತ್ಯ ಪ್ರಪಂಚಕ್ಕೆ ಕಾಲಿರಿಸಿದ ಶ್ರೀ ಸಿ.ಆರ್. ಸತ್ಯ ಅವರಿಗೆ ಈ ವರ್ಷ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಅನುವಾದ ಪ್ರಶಸ್ತಿ ಲಭಿಸಿದೆ. ಇವರಿಬ್ಬರನ್ನೂ ನಾವು ಅಭಿನಂದಿಸುತ್ತೇವೆ.

1993ರ ಜನವರಿಯಿಂದ ಈ ಜನವರಿಯವರೆಗೆ 200ಕ್ಕೂ ಹೆಚ್ಚು ವೈವಿಧ್ಯಮಯ ಕಾರ್ಯಕ್ರಮಗಳನ್ನು ನಾವು ಸಂಯೋಜಿಸಿದ್ದೇವೆ. ಕಾರ್ಯಕ್ರಮದ ಗುಣಮಟ್ಟದ ಬಗ್ಗೆ ನಮ್ಮ ಪ್ರಬುದ್ಧ ಪ್ರೇಕ್ಷಕರು ಮೆಚ್ಚುಗೆ ಸೂಚಿಸಿದ್ದಾರೆ. ಹಾಗಿದ್ದೂ ನಾವು ಈ ಸಂಸ್ಥೆಯನ್ನು ಒಂದು ಸಂಶೋಧನಾ ಕೇಂದ್ರವೆಂದು ಅಥವಾ ಕನಿಷ್ಠ ಜನರಲ್ಲಿ ಸಾಹಿತ್ಯದ ಓದನ್ನು ಪ್ರೇರೇಪಿಸುವ ಸಂಸ್ಥೆಯಾಗಿ ಮಾಡುವುದರಲ್ಲಿ ಸಂಪೂರ್ಣ ಯಶಸ್ಸನ್ನು ಗಳಿಸಿಲ್ಲ. ನಮ್ಮ ಬಹುತೇಕ ಕಾರ್ಯಕ್ರಮಗಳು ಲಕ್ಷ್ಮೀನಾರಾಯಣ ಚಡಗ ಮೆಮೋರಿಯಲ್ ಟ್ರಸ್ಟ್ ಮತ್ತು ತರಳಬಾಳು ಕೇಂದ್ರಗಳ ಸಂಯುಕ್ತ ಆಶ್ರಯದಲ್ಲಿ ನಡೆಸಲ್ಪಡುತ್ತಿರುವ ತರಳಬಾಳು ಗ್ರಂಥಾಲಯದಲ್ಲಿ

ನಡೆದರೂ ಅಲ್ಲಿರುವ 20 ಸಾವಿರಕ್ಕೂ ಹೆಚ್ಚಿನ ಪುಸ್ತಕಗಳ ಪೈಕಿ 1% ಪ್ರತಿಶತ ಪುಸ್ತಕಗಳನ್ನೂ ಓದುಗರು ಕೊಂಡೊಯ್ಯದಿರುವುದು ಜನರ ಪುಸ್ತಕ ಪ್ರೀತಿ ಬತ್ತಿ ಹೋಗುತ್ತಿರುವುದರ ಸಂಕೇತ. ನಾವು ಟಿ.ವಿ., ಇಂಟರ್‌ನೆಟ್‌ಗಳನ್ನು ಇದರ ಮೂಲಹೇತು ಎಂದು ದೂರ ಬಹುದೋ ಏನೋ. ಆದರೆ ಅಮೇರಿಕಾದಂತ ಮುಂದುವರಿದ ರಾಷ್ಟ್ರಗಳಲ್ಲಿ ಟಿ.ವಿ. ಮತ್ತು ಇಂಟರ್‌ನೆಟ್‌ಗಳು ಆ ಜನರ ಪುಸ್ತಕ ಪ್ರೀತಿಯ ಮೇಲೆ ಅಷ್ಟೇನೂ ದುಷ್ಪರಿಣಾಮ ಬೀರಿಲ್ಲ.

ದಿನಾಂಕ 20-11-2015ರಂದು ಲ.ನಾ.ಚ. ಟ್ರಸ್ಟ್ ಮತ್ತು ತರಳಬಾಳು ಕೇಂದ್ರದ ಸಹಯೋಗದಲ್ಲಿ ಗಮಕ ಕಾರ್ಯಕ್ರಮವನ್ನು ಶ್ರೀಮತಿ ಗಂಗಮ್ಮ ಕೇಶವಮೂರ್ತಿ, ಅಧ್ಯಕ್ಷರು, ಸಂಗೀತ ನೃತ್ಯ ಅಕಾಡೆಮಿಯವರು ನಡೆಸಿಕೊಟ್ಟರು. ಶ್ರೀಮತಿ ಸುನಂದಾ ಅವರು ವ್ಯಾಖ್ಯಾನ ಮಾಡಿದರು. ಕನ್ನಡದ ಅತ್ಯಂತ ಜನಪ್ರಿಯ ಭಕ್ತ ಕವಿಯಾದ ಕುಮಾರವ್ಯಾಸ ಭಾರತದ ಉದ್ಯೋಗ ಪರ್ವವನ್ನು ತಮ್ಮ ಸುಮಧುರ ಕಂಠದಲ್ಲಿ ಹಾಡಿದ ಶ್ರೀಮತಿ ಗಂಗಮ್ಮ ಕೇಶವಮೂರ್ತಿಯವರು ಕುಮಾರ ವ್ಯಾಸನ ಕಾವ್ಯದ ಅಂತಸತ್ವವನ್ನು ನೆರೆದ ಪ್ರೇಕ್ಷಕರ ಮನಮುಟ್ಟುವಂತೆ ಮಾಡಿದರು. ಗಮಕ ಕಲೆ ನಶಿಸುವುದಿಲ್ಲ ಎಂದು ಅವರು ಹೇಳಿದರು. ಹೊಸಗನ್ನಡದ ಸಾಹಿತ್ಯವನ್ನೇ ಅರ್ಥ ಮಾಡಿಕೊಳ್ಳಲು ಒದ್ದಾಡುವ ಕನ್ನಡಿಗರು ಪಂಪ, ರನ್ನ, ಜನ್ನರ ಕಾವ್ಯವನ್ನು ಅರ್ಥೈಸುವರ್ನೆ? ಕುಮಾರವ್ಯಾಸ ಕೆಲವು ಶತಕಗಳಿಂದ ಅತ್ಯಂತ ಜನಪ್ರಿಯವಾದ ಕವಿಯಾಗಿದ್ದ. ಮನೆಮನೆಯಲ್ಲಿ ಅವನ ಕರ್ನಾಟ ಭಾರತ ಕಥಾ ಮಂಜರಿ ಓದುತ್ತಿದ್ದರು. ಆದರೆ ಈ ಪೀಳಿಗೆಯ ಜನ ಕಾವ್ಯಗಳಿಂದ ವಿಮುಖರಾಗುತ್ತಿದ್ದಾರೆ.

ಅಕ್ಟೋಬರ್ 2015ರಿಂದ ಪ್ರತಿ ತಿಂಗಳು ಒಂದಲ್ಲ ಒಂದು ಕಾರ್ಯಕ್ರಮಗಳನ್ನು ಬೆಂಗಳೂರು/ಸಾಸ್ತಾನದಲ್ಲಿ ನಡೆಸಿದ ನಾವು, ಈಗ 21-02-2016ರಂದು ಆಚರಿಸುತ್ತಿರುವ ಕವಿ ಗೋಪಾಲಕೃಷ್ಣ ಅಡಿಗರ 99ನೇ ಜಯಂತಿ (ಜನನ 18-02-1918) ಆಚರಿಸುತ್ತಿರುವ ಸಂದರ್ಭದಲ್ಲಿ ಈ ಸಂಚಿಕೆ ಹೊರಬರುತ್ತಿದೆ.

ಕನ್ನಡವನ್ನು ಕಟ್ಟುವ ಕಾಯಕದಲ್ಲಿ ನಮ್ಮ ಅಳಿಲು ಸೇವೆಯಂತೂ ನಡೆಯುತ್ತಾ ಇದೆ. ಬನ್ನಿ, ನೀವೂ ನಮ್ಮೊಡನೆ ಕೈ ಜೋಡಿಸಿ, ಹೆಚ್ಚು ಹೆಚ್ಚು ಜನರು ನಮ್ಮ ವೇದಿಕೆಯ ಸದಸ್ಯರಾಗಿ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕಾಗಿ ವಿನಂತಿ. ನಮ್ಮ ಕಾರ್ಯಕ್ರಮಗಳ ಹಾಗೂ ಹಣತೆಯ ಕುರಿತು ನಿಮ್ಮ ಪ್ರಾಂಜಲ ಅಭಿಪ್ರಾಯವನ್ನು ಬರೆದು ತಿಳಿಸುವಿರಾ.

ಇಂತಿ,

**ಪ್ರಾ. ಚಂದ್ರಶೇಖರ ಚಡಗ**

# ದೃಶ್ಯ ಕಲಾ ಮಾಧ್ಯಮಕ್ಕೆ ಕಾರಂತರ ಕೊಡುಗೆ

ಡಾ। ಎಲ್.ಜಿ. ಮೀರಾ

"ಸಪ್ತವರ್ಣದ ಕಾಮನ ಬಿಲ್ಲು". ಇದು ಡಾ। ಕೋಟ ಶಿವರಾಮ ಕಾರಂತರನ್ನು ವರ್ಣಿಸಲು ಅವರ ನಿಡುಗಾಲದ ಬಾಳಸಂಗಾತಿ ಶ್ರೀಮತಿ ಲೀಲಾ ಕಾರಂತರು ಬಳಸಿದ ಪದ. ಹೌದು. ಕಾರಂತರು ಸಪ್ತವರ್ಣದ ಕಾಮನಬಿಲ್ಲೇ ಸರಿ. ಅವರು ಕರ್ನಾಟಕದ ಹೆಮ್ಮೆಯ ಲೇಖಕ, ಕಲಾಚಿಂತಕ, ಅಷ್ಟೇ ಅಲ್ಲ ಕನ್ನಡ ಮಕ್ಕಳ ಬಾಲವನದ ಪ್ರೀತಿಯ ಕಾರಂತಜ್ಜ.

ಬಹುಮುಖ ಪ್ರತಿಭೆಯ ಈ ಹಿರಿಯರ ಬಗ್ಗೆ ತುಸುವಾದರೂ ತಿಳಿದುಕೊಂಡ ಯಾರಿಗೇ ಆಗಲಿ, 'ಒಬ್ಬ ವ್ಯಕ್ತಿ ಒಂದು ಜೀವನದಲ್ಲಿ ಇಷ್ಟೆಲ್ಲಾ ಮಾಡಲು ಸಾಧ್ಯವೇ?' ಎಂಬ ಪ್ರಶ್ನೆ ಕಾಡದಿರದು. ಈ ಪ್ರಾತಃಸ್ಮರಣೀಯರು ದೃಶ್ಯ ಕಲಾ ಮಾಧ್ಯಮಕ್ಕೆ ಕೊಟ್ಟ ಕೊಡುಗೆಯನ್ನು ಗಮನಿಸುವ ಪ್ರಯತ್ನ ಈ ಪ್ರಬಂಧದ್ದು. ದೃಶ್ಯಕಲೆ ಎಂದಾಗ ಕಾರಂತರ ಶುದ್ಧ ಸಾಹಿತ್ಯೇತರ ಅಭಿವ್ಯಕ್ತಿಗಳು ಅಂದರೆ ಯಕ್ಷಗಾನವೂ ಸೇರಿದಂತೆ ರಂಗಭೂಮಿ, ಸಂಗೀತ, ಚಿತ್ರಕಲೆ, ನೃತ್ಯ, ಚಲನಚಿತ್ರ ಮಾಧ್ಯಮಗಳನ್ನು ಇಲ್ಲಿ ಪರಿಗಣಿಸಲಾಗಿದೆ.

ಕಾರಂತರ ಕಲಾಸಕ್ತಿಯ ಮೂಲವನ್ನು ಹುಡುಕುತ್ತಾ ಹೋದರೆ, (ಸಾಮಾನ್ಯವಾಗಿ ಎಲ್ಲ ಪ್ರತಿಭಾವಂತರ ವಿಷಯದಲ್ಲಿ ಆಗುವಂತೆ,) ಹಿಂದುಹಿಂದಕ್ಕೆ ಚಲಿಸಿ ನಾವು ಅವರ ಬಾಲ್ಯಕಾಲವನ್ನು ತಲುಪುತ್ತೇವೆ.

ಕಾರಂತರದ್ದು ಬಾಲ್ಯದಲ್ಲಿಯೇ ತಮ್ಮ ಊರಿನ ಪ್ರಾಕೃತಿಕ ಸೌಂದರ್ಯಕ್ಕೆ ತೆರೆದ ಕಣ್ಣು. ಚೆಲುವಿಗೆ ತೆರೆದ ಕಣ್ಣಿಲ್ಲದವರು ಕಲಾವಿದರಾಗಲು ಸಾಧ್ಯವಿಲ್ಲ. ಸೌಂದರ್ಯದ ಬಾಯಾರಿಕೆ ಎಂಬುದು ಈ ವಿಷಯದಲ್ಲಿ ಕಾರಂತರು ಬಳಸುವ ಪದ. (ಯೂರೋಪಿನ ಪ್ರವಾಸವನ್ನು ಕುರಿತು ಬರೆಯುವಾಗ ಈ ಪದ ಬಳಸುತ್ತಾರೆ.)

'ನನ್ನ ಊರು ಸುಂದರವಾದೊಂದು ಹಳ್ಳಿ. ದಕ್ಷಿಣ ಕನ್ನಡದಲ್ಲಿ ಬಹಳ ವಿರಳವೆನಿಸುವ ಮೈದಾನು ಭೂಮಿ. ಒಂದೇ ಮಟ್ಟದ ಹೊಲಗದ್ದೆಗಳು, ನಡುವೆ ತೆಂಗಿನ ತೋಪುಗಳು, ಹಾಡಿಗಳು, ಮನೆಗಳು, ಎರಡು ಪುಟ್ಟ ಖಾರಿಗಳು (ಬ್ಯಾಕ್ ವಾಟರ್) ನಮ್ಮೂರಿನ ಆಚೀಚೆ ಹರಿಯುತ್ತವೆ. ಪಡುವಣದಲ್ಲಿರುವ ಹಂಗಾರಕಟ್ಟೆ ಕೋಡಿಯಿಂದ ಕುಂದಾಪುರ ಕೋಡಿಯ ತನಕ ಹನ್ನೆರಡು ಮೈಲುಗಳ ಉದ್ದಕ್ಕೂ ಹಾಸಿರುವ ಸುಂದರವಾದ ಕಡಲಿನ ದಂಡೆಯಿದೆ. ಒಂದೇ ಒಂದು ಬಂಡೆಯಿಲ್ಲ. ಚಿಕ್ಕಂದಿನಿಂದ ಇಂದಿಗೂ, ನಮ್ಮ ಮನೆಗೆ ಎರಡು ಮೈಲು ದೂರದಲ್ಲಿರುವ ಆ ಕಡಲ ದಂಡೆಯನ್ನು ತುಳಿಯದೆ, ಉಪ್ಪು ನೀರಿನಲ್ಲಿ ಉರುಳಾಡದೆ, ಒಣ ಮೀನಿನ ಗಂಧವನ್ನು (ಅನಿವಾರ್ಯವಾಗಿ) ಮೂಸದೆ ನನಗೆ ತೃಪ್ತಿಯೇ ಇಲ್ಲ. ಅಷ್ಟು ಪ್ರಶಾಂತವಾದ ಕಡಲು ಇನ್ನೆಲ್ಲಿದೆ? ..... ಅಲ್ಲಿನ ಸೃಷ್ಟಿಯ ಚೆಲುವೇ ಚೆಲುವು! ಆ ಕಡಲಿನ ನೀಲವೂ, ಪ್ರಶಾಂತವೂ, ವಿಸ್ತಾರವೂ ಆದ ನೋಟ ಮನಸ್ಸಿನ ಮೇಲೆ ಉಂಟುಮಾಡಬಲ್ಲ ಪರಿಣಾಮ ಅಷ್ಟಿಷ್ಟಲ್ಲ.' (ಹುಚ್ಚು ಮನಸ್ಸಿನ ಹತ್ತು ಮುಖಗಳು)

ಬಾಲಕ ಕಾರಂತರ ಸಂವೇದನೆಯನ್ನು ರೂಪಿಸುವಲ್ಲಿ ಅವರ ಊರಿನ ಸುಂದರ ಪ್ರಕೃತಿಯ ಜೊತೆ ಸಂಸ್ಕೃತಿಯ ಪಾತ್ರವೂ ಇದೆ. ಅವರು ಚಿಕ್ಕಂದಿನಲ್ಲಿ ನೋಡಿದ ಬಯಲಾಟಗಳು (ಅದರಲ್ಲೂ ಮೂರು ವರ್ಷ ವಯಸ್ಸಿನಲ್ಲಿ ನೋಡಿದ ಮಹಂಕಾಳಿಯ ವೇಷ ಅಂದರೆ ಚಂಡಿವೇಷ), ಬಣ್ಣದ ವೇಷಗಳು, ನಾಗನೃತ್ಯ... ಇವು ಆ ಎಳೆಯ ಮನಸ್ಸಿನ ಮೇಲೆ ಗಾಢಪ್ರಭಾವ ಬೀರಿದವು.

ಸುಂದರವಾದ ಪ್ರಕೃತಿ, ಶ್ರೀಮಂತ ಸಂಸ್ಕೃತಿ ಇರುವ ಊರಿನಲ್ಲಿ ಬೆಳೆದ ಯಾವುದೇ ಬಾಲಕನ ಮೇಲಾದರೂ ಅವು ಪ್ರಭಾವ ಬೀರಬಹುದು. **ಆ ಪ್ರಭಾವದಿಂದ ವ್ಯಕ್ತಿ ತಮ್ಮ ವ್ಯಕ್ತಿತ್ವವನ್ನು ಹೇಗೆ ಬೆಳೆಸಿಕೊಳ್ಳುತ್ತಾರೆ ಎಂಬುದು ಮುಖ್ಯ.** ಕಾರಂತರ ವೈಶಿಷ್ಟ್ಯ ಇಲ್ಲೇ ಇರುವುದು. ಅವರು ಇತರರಿಗಿಂತ ಭಿನ್ನವಾಗುವುದುಎಲ್ಲಿ ಅಂದರೆ ತಮ್ಮ ಮನಸ್ಸನ್ನು ಸೆಳೆದ ಕ್ಷೇತ್ರಗಳಿಗೆ ತಾವೂ ಏನಾದರೂ ಕೊಡುಗೆ ಕೊಡಬೇಕೆಂದು ವಿಚಾರ ಮಾಡುವುದು. ಇದು ಹೇಗೆ ಎಂದು ಅವರ ಮಾತುಗಳಲ್ಲೇ ಗಮನಿಸಬಹುದು.

'ನಾನು ನನ್ನ ಬಾಳ್ವೆಯ ಉದ್ದಕ್ಕೂ ನನ್ನ ಗಮನವನ್ನು ಸೆಳೆದ ವಿಷಯಗಳನ್ನು ಕುರಿತು ಆಸಕ್ತಿ ತಾಳಿದೆ. ಆ ಕ್ಷೇತ್ರದಲ್ಲಿ ನನ್ನಿಂದೇನೇನು ಸಾಧ್ಯ ಎಂಬುದನ್ನು ನೋಡತೊಡಗಿದೆ. ಈ ಬಗೆಯ ಕುತೂಹಲ ಮತ್ತು ಆಸಕ್ತಿಗಳಿಂದಾಗಿ ನನ್ನ ಕಾರ್ಯ ಕ್ಷೇತ್ರ ವಿಸ್ತರಿಸಿತು. ಅಂಥ ಕ್ಷೇತ್ರಗಳಲ್ಲಿ ನಾಟಕ, ಚಲನಚಿತ್ರ, ನೃತ್ಯಗಳಂತಹ ದೃಕ್‌ಶ್ರಾವ್ಯ ಮಾಧ್ಯಮಗಳೂ ಸೇರಿಕೊಂಡವು.' (ಹುಮಹಮು)

## ಪ್ರದರ್ಶನ ಕಲೆಯ ವಿಚಾರದಲ್ಲಿ ಕಾರಂತರ ಪ್ರಯೋಗಗಳು

ಕಾರಂತರದ್ದು ಸದಾ ಪ್ರಯೋಗಶೀಲವಾದ ಮನಸ್ಥಿತಿ. ತಮ್ಮ ಅನುಭವವನ್ನು ಅಭಿವ್ಯಕ್ತಿಸಲು ವಿವಿಧ ಕಲೆಗಳನ್ನು ಮಾಧ್ಯಮವಾಗಿ ಬಳಸಿದ್ದಾರೆ. ಈ ಬಗ್ಗೆ ತಮ್ಮ ಒಂದು ಸಂದರ್ಶನದಲ್ಲಿ ಹೀಗೆ ಹೇಳಿದ್ದಾರೆ.

"ನನ್ನ ದೃಷ್ಟಿಯಲ್ಲಿ ನನ್ನ ಅನುಭವ ಇಂತಹ ರೀತೀಲಿ ಹೇಳಿದ್ರೆ ಪರಿಣಾಮಕಾರಿಯಾಗುತ್ತೆ. ಇಂತಹ ವಸ್ತುವನ್ನು ಯಾವುದೋ ಒಂದು ದೃಶ್ಯರೂಪಕದಲ್ಲಿ ಹೇಳಿದ್ರೆ ಪರಿಣಾಮಕಾರಿಯಾಗುತ್ತೆ. ಇಂಥದ್ದು ಬರವಣಿಗೆಯಲ್ಲಿ ಹೇಳಿದ್ರೆ ಪರಿಣಾಮಕಾರಿಯಾಗುತ್ತೆ, ಇಂಥದ್ದು ಬಾಯಿಮುಚ್ಚಿಕೊಂಡು ಅಭಿನಯದಲ್ಲಿ ಹೇಳಿದ್ರೆ ಪರಿಣಾಮಕಾರಿಯಾಗಿರುತ್ತೆ – ಹೀಗೆ ಇದು ಯಾವುದರಲ್ಲಿ ಏನೇನು ಆಗುತ್ತೇಂತ ನಾನು ಪ್ರಯೋಗ ಮಾಡಿದ್ದರಿಂದ ಸ್ವಾಭಾವಿಕವಾಗಿ ಹತ್ತು ತರದಲ್ಲಿ ಮಾಡಿಕೊಂಡು ಹೋಗಿದ್ದೇನೆ." (ಕಾರಂತ – ಜಿ.ಪಿ. ಬಸವರಾಜು ಅವರೊಡನೆ ಸಂವಾದದಲ್ಲಿ ಹೇಳಿದ್ದು)

**ಯಕ್ಷಗಾನ:** ಕಲೆಯ ಕ್ಷೇತ್ರದಲ್ಲಿ ಕಾರಂತರು ಕೊಟ್ಟ ಕೊಡುಗೆಗಳನ್ನು ನೆನೆಯುವಾಗ ಮೊದಲು ಬರುವುದು ಯಕ್ಷಗಾನ ಕ್ಷೇತ್ರ. ಇಪ್ಪತ್ತು ವರ್ಷ ಸಂಶೋಧನೆ ಮಾಡಿ ಈ ಕಲೆಯನ್ನು ಕುರಿತು ಅನೇಕ ಹೊಸ ಹೊಸ ಅಂಶಗಳನ್ನು ಶೋಧಿಸಿದರು. ಅವುಗಳಲ್ಲಿ ಮುಖ್ಯವಾದ ವಿಷಯವೆಂದರೆ ಯಕ್ಷಗಾನಕ್ಕೆ ವಿಶಿಷ್ಟವಾದ ಉತ್ತರಾದಿಯೂ ಅಲ್ಲದ, ದಕ್ಷಿಣಾದಿಯೂ ಅಲ್ಲದ ನೂರಾರು ರಾಗಗಳಿವೆ ಎಂಬುದನ್ನು ಕಾರಂತರು ತಮ್ಮ

ಸಂಶೋಧನೆಯಿಂದ ತಿಳಿದುಕೊಂಡಿದ್ದಾರೆ. ದುರ್ಧರಿ, ಪಂಚಾಗತಿ, ಕನ್ನಡ, ಹೂವು ಕೋರೆ, ಮೆಚ್ಚು, ಮೇಚಾಳಿ ... ಯಂತಹ ಹೊಸ ರಾಗಗಳು! ಸುಮಾರು ಎಂಬತ್ತರಷ್ಟು ಹೊಸ ರಾಗಗಳು. ಯಕ್ಷಗಾನ ಒಂದು ಜಾನಪದ ಗೀತೆಯೆಂಬ ನನಗಿದ್ದ ಭಾವನೆ ಅಳಿಸಿ, ಅದೊಂದು ಸ್ವತಂತ್ರ ಗಾನಶೈಲಿಯೆಂಬ ಅರಿವು ಬಂತು ಎಂದಿದ್ದಾರೆ.

ನಾಗನೃತ್ಯವು ಈ ಕಲೆಗೆ ಮೂಲವೆಂಬ ವಿಚಾರ. ಈ ವಿಷಯದಲ್ಲಿ ತಮ್ಮ ಗ್ರಂಥದಲ್ಲಿ ಆಧಾರಸಹಿತವಾದ ದೀರ್ಘಚರ್ಚೆಗಳನ್ನು ಮಾಡಿದ್ದಾರೆ.

ವೇಷಭೂಷಣಗಳನ್ನು ಹೊಸರೀತಿಯಲ್ಲಿ ಯೋಜಿಸಿದ್ದು, ಮಾತುಗಳನ್ನು ತೆಗೆದು ನೃತ್ಯನಾಟಕ ರೂಪವನ್ನು ಕೊಡುವ ಹೊಸ ಪ್ರಯೋಗ ಮಾಡಿದ್ದು ಇವು ಕಾರಂತರು ಆ ಕಲೆಗೆ ಕೊಟ್ಟ ಕೊಡುಗೆಗಳು. ಒಟ್ಟಿನಲ್ಲಿ ಕಾರಂತರು ಯಕ್ಷಗಾನಕ್ಕೆ ಅಮೂಲಾಗ್ರ ಕಾಯಕಲ್ಪ ಕೊಟ್ಟರೆಂದರೆ ಉತ್ಪ್ರೇಕ್ಷೆ ಎನಿಸಲಾರದು. ವಿದ್ವಾನ್ ಸುಧೀರ್ ಕೊಡವೂರು ಅವರು ಕಾರಂತರ ಕಲ್ಪನೆಯ ಕೂಸಾದ ನೃತ್ಯನಾಟಕ (ಬ್ಯಾಲೆ) ಶೈಲಿಯ ಯಕ್ಷಗಾನದ ಪ್ರದರ್ಶನಗಳನ್ನು ಕರ್ನಾಟಟಕ ಕಲಾದರ್ಶಿನಿ ತಂಡದ ಮೂಲಕ ಕೈಗೊಂಡಿರುವುದು ಅಭಿನಂದನೀಯ ವಿಷಯವಾಗಿದೆ. ಈ ಪ್ರದರ್ಶನಗಳಲ್ಲಿ ಭಾವಪ್ರಕಟಣೆಯ ಉತ್ತಮಿಕೆಗಾಗಿ ಕಾರಂತರು ಬಳಕೆಗೆ ತಂದ ಸ್ಯಾಕ್ಸೋಫೋನ್ ಹಾಗೂ ವಯಲಿನ್‌ಗಳನ್ನ ಬಳಸುತ್ತಿರುವುದು ಒಂದು ಗಮನೀಯ ವಿಷಯ.

**ನೃತ್ಯಕ್ಷೇತ್ರ:** 1932ರಷ್ಟು ಹಿಂದೆ ತಮ್ಮ 30ನೇ ವಯಸ್ಸಿನಲ್ಲಿ ಮುಕ್ತದ್ವಾರವೆಂಬ ಗೀತನಾಟಕವನ್ನು ಬರೆದರು (ಮುಂದೆ ಇದನ್ನು ಕನ್ನಡದ ಪ್ರಥಮ ಗೀತನಾಟಕವೆಂದು ಗುರುತಿಸಲಾಯಿತು). ಕಾಲಪುರುಷನು ಯುಗಾಂತರಗಳಲ್ಲಿ ಯಜ್ಞವಲ್ಕ್ಯ, ಬುದ್ಧ, ಕೃಷ್ಣ, ಯೇಸುವಾಗಿ ಬಂದು ಜಗಕ್ಕೆ ಸಂದೇಶ ಸಲ್ಲಿಸಿದ. ಆದರೆ ಜನ ಅದನ್ನು ಮರೆತುಬಿಟ್ಟರು. ಕಾಲಪುರುಷ ಚಕ್ರದಂತೆ, ಅಗ್ನಿಯಂತೆ, ವ್ಯಕ್ತಿಯಂತೆ, ಪಕ್ಷಿಯಂತೆ, ಸರ್ಪದಂತೆ ... ಬಗೆಬಗೆಯಿಂದ ತನ್ನ ಲೀಲೆಯನ್ನು ತೋರಿಸುವ ಅಂಶವನ್ನು ನೃತ್ಯದ ಮೂಲಕ ತೋರಿಸಬೇಕಿತ್ತು. ನೃತ್ಯದ ತರಂಗಿತತೆ, ಕಾಲ, ಗತಿ, ರೇಖೆಗಳಲ್ಲಿ ವಿಚಾರಗಳು ಹೇಗೆ ಹೊರಹೊಮ್ಮುತ್ತವೆಂದು ... ತಾಳದ ಬಡಿತಕ್ಕೆ ಸರಳ ಹೆಜ್ಜೆಗಳನ್ನಿಡುತ್ತ, ಕೈಯಿಂದ ಮುಖಮುದ್ರೆಗಳಿಂದ ಕಾಲನ ಒಂದೊಂದೂ ಭಾವವನ್ನು ಸೃಷ್ಟಿಸತೊಡಗಿದರು. ತಮ್ಮ ಶಿಷ್ಯೆಗೆ ಕಲಿಸುವ ಸಂದರ್ಭದಲ್ಲಿ ತಾವೇ ನರ್ತನಕ್ಕೆ ನಿಂತರು. 'ನೃತ್ಯ ಪ್ರಿಯವಾಗತೊಡಗಿತು. ಭಾವದಲ್ಲಿ ನಾನೆಷ್ಟು ತಲ್ಲೀನನಾಗಬಹುದೋ ಅಷ್ಟಷ್ಟು ಹೆಚ್ಚಾಗಿ ನೃತ್ಯ ಸೃಷ್ಟಿಯೂ ಸಾಧ್ಯವಾಗುತ್ತಾ ಬಂದಿತು.'

**ತರಂಗಿತತೆ, ಮನೋಗತಿ, ಶರೀರ ಗತಿ:** ನೃತ್ಯದಲ್ಲಿ ಸಹಜ ಸೌಕರ್ಯ. ಅದರ ಗತಿ ಎಷ್ಟೆಷ್ಟು ತೀವ್ರವಾಗುತ್ತದೋ ಅಷ್ಟಷ್ಟು ತನ್ಮಯತೆ ಹೆಚ್ಚುತ್ತದೆ. ಇದಕ್ಕೆ ಕಾರಣವೇನೆಂದರೆ ನೃತ್ಯ ವ್ಯಾಪಾರ ಮಾನಸಿಕವೂ ಹೌದು, ಶಾರೀರಿಕವೂ ಹೌದು. ರಕ್ತ ಹೆಚ್ಚಾಗಿ ಮೆದುಳಿಗೆ ಹೋದಂತೆ ಭಾವ ಉದ್ರೇಕಗೊಳ್ಳುತ್ತದೆ. ಮೂಲದಲ್ಲಿ ತೊಡಗಿದ ಕಲ್ಪನೆಗಳು.. ಕಾಲ ಗತಿಯಿಂದ ಬೆಳೆಬೆಳೆದು ತೀವ್ರವಾಗುತ್ತವೆ. ನಮ್ಮ ಊರಿನಲ್ಲಿ ಹೊಲೆಯರ ಕುಣಿತ, ರಾಣಿಯರ ಕುಣಿತ,

ದೆವ್ವದ ಕುಣಿತ ಕಂಡಿರುವ ನನಗೆ ಈ ಮಾತಿನ ಸತ್ಯ ಗೋಚರವಾಗಿದೆ. ಅದೇ ಸೌಕರ್ಯ ಶರೀರದ ತೀವ್ರ ಚಟುವಟಿಕೆ ಬೇಡವಾದ ಇತರ ಕಲೆಗಳಿಗಿಲ್ಲ.

**ಹಾವಭಾಷೆ, ಭಾವಭಾಷೆ:** ನೃತ್ಯವು ಒಂದು ಭಾಷೆ ಮಾಡುವ ಕೆಲಸವನ್ನು ಮಾಡಲಾರದು. ಭಾಷೆಯನ್ನು ಅನುವಾದಿಸುವಲ್ಲಿ ಅದು ಪರಿಪೂರ್ಣವಲ್ಲ. ಹಾವಾಂದರಿಸುವುದು ದುರ್ಬಲ ಭಾಷೆ.

ಭರತನಾಟ್ಯದ ಸಂದರ್ಭದಲ್ಲಿ ಕಾರಂತರ ಚಿಂತನೆ ಮನನಯೋಗ್ಯವಾದುದು. ಭರತನಾಟ್ಯದಲ್ಲಿ ಅಭಿನಯದೊಂದಿಗೆ ಮಾತೂ ಬೇಕು. ಹಾವಗಳದೇ ಭಾಷೆ ಕೆಲವು ಆದಿವಾಸಿಗಳಲ್ಲಿದೆ. ಆದರೆ ಅದನ್ನು ನೃತ್ಯ ಎನ್ನುತ್ತೇವೆಯೇ?

ಆಲಿಬಾಬ, ಹೂವಿನ ಶೀಲಭಂಗ, ಹೀಗೆ .... ಅನೇಕ ವಸ್ತುಗಳನ್ನು ಕುರಿತು ನೃತ್ಯವಾಟಕಗಳನ್ನು ಪ್ರದರ್ಶಿಸಿದರು. ಹಲಸಂಗಿಯಲ್ಲಿ ನೋಡಿದ ನವಿಲಿನ ನರ್ತನವನ್ನು ಮುಂದೆ ಮೇಘಮಯೂರ ಎಂಬ ನೃತ್ಯನಾಟಕವನ್ನು ಮಾಡಿಸಿದ್ದಾರೆ.

**ಸಂಗೀತ:** ಸಂಗೀತ ಕಲಿಯಲು ಮಾಡಿದ ಪ್ರಯತ್ನಗಳು. ಅದನ್ನು ಕಾರಂತರು ಹಾಸ್ಯಮಯವಾಗಿ ವರ್ಣಿಸುತ್ತಾರೆ. ಅವರನ್ನು ಕಾರಂತ್ ಮಹಾರಾಜ್ ಎಂದು ಕರೆಯುತ್ತಿದ್ದ ಮೋತಿ ಸಿಂಗ್ ಕಲಿಸಿದ ಪಾಠಗಳು ಮತ್ತು ಜಾನಪದ ಗೀತೆಗಳ ವಿಷಯದಲ್ಲಿ ವಿದ್ವಾಂಸರಾದ ಹಾಲೆಂಡಿನ ಬಾಕೆ ಮತ್ತು ಅವರ ಪತ್ನಿ ಜೊತೆಗೆ ಕೆಲಸ ಮಾಡಿದ ಅನುಭವ ತಮಗೆ ಗೀತ ನಾಟಕಗಳನ್ನು ರಚಿಸುವ ಧೈರ್ಯ ಕೊಟ್ಟಿತು ಎನ್ನುತ್ತಾರೆ.

**ನಾಟಕ:** ಕಾರಂತರು ಗದ್ಯ ನಾಟಕಗಳು ಗೀತ ನಾಟಕಗಳು ಎರಡನ್ನೂ ಬರೆದಿದ್ದರೂ ಕನ್ನಡ ಸಾಹಿತ್ಯ ಚರಿತ್ರೆಯು ಅವರು ಗೀತ ನಾಟಕಗಳನ್ನು ಮೊದಲು ಬರೆದವರೆಂದು ವಿಶೇಷವಾಗಿ ಗುರುತಿಸುತ್ತದೆ.

ನಾಟಕಕಾರರ ಬಗ್ಗೆ ಕಾರಂತರು ಒಂದು ಮುಖ್ಯವಾದ ಮಾತನ್ನು ಹೇಳಿದ್ದಾರೆ. 'ನಾಟಕಕಾರರಾಗುವವರು ತಮ್ಮ ಮಾಧ್ಯಮದ ವಿಸ್ತಾರ ವೈಶಿಷ್ಟ್ಯಗಳ ಪರಿಚಯ, ಅಭ್ಯಾಸಗಳಿಂದ ತಮ್ಮ ಶಕ್ತಿಯನ್ನೇ ಬೆಳೆಯಿಸಿಕೊಂಡು – ತಮಗೂ ಸಮಾಜಕ್ಕೂ ನಡುವೆ ನಾಟಕಕಲೆಯ ಒಂದು ಸುಂದರವಾದ ಬಲಿಷ್ಠವಾದ ಸೇತುವೆಯನ್ನೇ ರಚಿಸಬೇಕು. ಕಲ್ಪನಾಲೋಕಕ್ಕೂ ವಾಸ್ತವಿಕ ಜೀವನಕ್ಕೂ ನಡುವೆ ಹಾಯಬಲ್ಲ ಸೇತುವೆ ಒಂದು ಅಗಾಧ ಸೃಷ್ಟಿ ಎಂದರೂ ತಪ್ಪಲ್ಲ.'

ನಾಟಕ ರಚನೆ, ಪ್ರದರ್ಶನಗಳ ವಿಷಯದಲ್ಲಿ ಕಾರಂತರ ಚಿಂತನೆ ಹೇಗಿತ್ತು ಎಂಬುದಕ್ಕೆ ಇಲ್ಲೊಂದು ಉದಾಹರಣೆ ಇದೆ. "ನಾನು ಬರೆದುದೊಂದು ಗದ್ಯನಾಟಕದ ಹೆಸರು 'ಬಿತ್ತಿನ ಬೆಳೆ.' .... ಈ ನಾಟಕವನ್ನೋದಿದ ಒಬ್ಬರು ಇದು ಕಾದಂಬರಿಯಂತಿದೆ. ನಾಟಕದಂತಿಲ್ಲವಲ್ಲ. ಇದನ್ನು ಆಡಲು ಬಂದೀತೇ? ಎಂದರು. ನಾನು ನುಡಿದೆ ನಿಮಗೆ ಅಭಿನಯ ಬರುತ್ತದೆಯೇ? ಎಂದಾದರೂ ರಂಗಭೂಮಿ ಹೊಕ್ಕಿದ್ದೀರಾ?" ಎಂದು. ರಂಗಸ್ಥಳದ ಅನುಭವವಿಲ್ಲದೆಯೂ ವಿಮರ್ಶೆಗೆ ನಾವು ಮುಂದಾದರೆ ಹೇಗೆ? ಊಹಿಸಿ ಬರೆಯುವ ಸ್ವಭಾವ ನನ್ನದಲ್ಲ. ನಟನಾಗಿಯೇ ಲೇಖನಿ ಹಿಡಿಯುವುದು ನನ್ನ ರೀತಿ.

"ಆದರ್ಶವಾದಿ ನಾಟಕದಲ್ಲಿ ಭಾವಪ್ರಧಾನವಾದುದನ್ನು ಗೀತನಾಟಕವಾಗಿ ಚಿತ್ರಿಸುವ ಸಾಹಸ ಮಾಡಿದೆ. ನಮ್ಮಲ್ಲಿ ಒಪೆರಾ ಪ್ಲೇಸ್ ಇಲ್ಲ. ಸಂಗೀತ ಮತ್ತು ಗದ್ಯ ಎರಡನ್ನೂ ಸೇರಿಸಿ, ಎರಡರ ಸಾಧ್ಯತೆಯನ್ನೂ ಕೆಡಿಸುವ ದಾರಿಗಿಂತ ಅದನ್ನು ಬೇರೆ ಬೇರೆಯಾಗಿ ಬಳಸುವುದು ಒಳಿತೆಂದು ಅನಿಸಿತು."

ಮಠ ದೇವಾಲಯಗಳಲ್ಲಿರುವ ಕೊಳೆ, ಕೆಸರನ್ನು ತೋರುವಂತಹ ಗರ್ಭಗುಡಿ ಎಂಬ ನಾಟಕವನ್ನು ಕಾರಂತರು ನಿರ್ಭಯವಾಗಿ ಬರೆದರು.

**ಚಿತ್ರಕಲೆ:** ಕಾರಂತರು ಚಿತ್ರಕಲೆಯಲ್ಲಿ ತುಂಬ ಆಸಕ್ತಿ ಉಳ್ಳವರಾಗಿದ್ದರು. ಬೇರೆ ಬೇರೆ ರೀತಿಯ ಚಿತ್ರಗಳನ್ನು ತಾವು ಬಿಡಿಸಲು ಪ್ರಯತ್ನ ಪಟ್ಟಿದ್ದನ್ನು ತಮ್ಮ ಆತ್ಮಕಥನದಲ್ಲಿ ಹಂಚಿಕೊಂಡಿದ್ದಾರೆ. ಮಕ್ಕಳಿಗಾಗಿ ವಿಶ್ವಕೋಶಗಳನ್ನು ರಚಿಸುವಾಗ ಅವರ ಚಿತ್ರಕಲೆಯ ಪ್ರಯೋಜನ ಬಹುವಾಗಿ ಆಗಿದೆ.

ತಮ್ಮ 'ಭಾರತೀಯ ಚಿತ್ರಕಲೆ' ಎಂಬ ಕೃತಿಯಲ್ಲಿ ಈ ಕಲೆಯ ಭಾರತೀಯ ಮೂಲಗಳನ್ನು ಶೋಧಿಸುವ ಪ್ರಯತ್ನ ಮಾಡಿದ್ದಾರೆ. ರಾಜಾ ರವಿವರ್ಮನ ಐರೋಪ್ಯ ಶೈಲಿಯ ರೂಪಾನುಕರಣೆಯ ಚಿತ್ರಕಲೆಯೇ ಅಂತಿಮವಲ್ಲ ಎಂದು ಗುರುತಿಸಿಕೊಂಡು, ಅಸಿತ್‌ಕುಮಾರ್ ಹಾಲ್ದಾರ್, ನಂದಲಾಲ ಬಸು, ರವೀಂದ್ರನಾಥ ಟ್ಯಾಗೋರ್, ಚಿತ್ರಶಿಲ್ಪಿ ವೆಂಕಟಪ್ಪ ಮುಂತಾದವರ ಚಿತ್ರಕಲೆಯ ಸೂಕ್ಷ್ಮಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಚಿತ್ರಕಲೆಯಲ್ಲಿ ಆಸಕ್ತಿ ಉಳ್ಳವರು ಒಮ್ಮೆ ನೋಡಬೇಕಾದ ಪುಸ್ತಕ ಇದು.

**ಚಲನಚಿತ್ರ:** ಚಲನಚಿತ್ರ ಮಾಧ್ಯಮದ ಅಮಿತ ಸಾಧ್ಯತೆಗಳು ಕಾರಂತರಿಗೆ ತಿಳಿದಿದ್ದವು. ತಮ್ಮ ಆತ್ಮಕಥೆಯಲ್ಲಿ ಈ ಕ್ಷೇತ್ರದಲ್ಲಿ ತಾವು ಮಾಡಿದ ಪ್ರಯೋಗಗಳನ್ನು ತುಂಬ ಸ್ವಾರಸ್ಯಕರವಾಗಿ ಚಿತ್ರಿಸಿದ್ದಾರೆ. ಭೂತರಾಜ್ಯ ಎಂಬ ಕತೆ ಬರೆದು ಪುತ್ತೂರಿನ ಸಮೀಪದ ಸುಂದರ ಪ್ರದೇಶಗಳಲ್ಲಿ, ನಟ ನಿರ್ದೇಶಕ ಎಲ್ಲ ತಾವೇ ಆಗಿ, ತಮ್ಮ ಆಟೋಮೇಟಿಕ್ ಕ್ಯಾಮರಾದಿಂದ ಅದನ್ನು ಚಿತ್ರೀಕರಿಸಿದ್ದು, ತಿಂಗಳುಗಟ್ಟಲೆ ಕೆಲಸ ಮಾಡಿ ಎಂಟು ಸಾವಿರ ಅಡಿಯ ಒಂದು ಚಿತ್ರ ನಿರ್ಮಿಸಿದ್ದು, ಮೂರುವರೆ ಸಾವಿರ ರೂಪಾಯಿ ಬಂಡವಾಳ ಹಾಕಿದ್ದು, ದಿಲ್ಲಿಯ ಒಬ್ಬ ಡಿಸ್ಟ್ರಿಬ್ಯೂಟರ್‌ನಿಗೆ ಕೊಟ್ಟು ಅವನು ಅದನ್ನು ಅಡವಿರಿಸಿದ್ದು, ನಂತರ ತಾವೇ ಆ ಚಿತ್ರವನ್ನು ಬಿಡಿಸಿ ತಂದಿದ್ದು.... ನಂತರ ವಾಕಿ ಚಿತ್ರಗಳು ಪ್ರಬಲವಾದ ಮೇಲೆ ಈ ಸಾಹಸವನ್ನು ಬಿಟ್ಟಿದ್ದು... ಇದನ್ನು ವಿವರಿಸುತ್ತಾರೆ. ಪಾಶ್ಚಾತ್ಯ ಚಿತ್ರಗಳಿಗೆ ಹೋಲಿಸಿದರೆ ನಮ್ಮ ಚಿತ್ರಗಳ ಗುಣಮಟ್ಟ ಸಾಲದು ಎಂಬ ಅತೃಪ್ತಿಯನ್ನು ವ್ಯಕ್ತಪಡಿಸುತ್ತಾರೆ.

**ಕಾರಂತರ ಕಲಾ ಚಿಂತನೆ:** ಕಾರಂತರ ಕಲಾ ಚಿಂತನೆಯು ವಾಸ್ತವಿಕ, ಪ್ರಯೋಗಾತ್ಮಕ, ವಿಮರ್ಶಾತ್ಮಕ ಹಾಗೂ ಸೂಕ್ಷ್ಮವಾದುದು. ಭಾಷೆಯನ್ನು ರೂಪವನ್ನು ಮೀರಿದ ಕಲಾಭಿವ್ಯಕ್ತಿಯ ಬಗೆಗೂ ಸೂಕ್ಷ್ಮ ಅರಿವುಳ್ಳವರು.

'ಮೇರೆಯಿಂದ ಮೇರೆಯುಳ್ಳ ಆನಂದವೇ ಸಿಗುವುದು. ಹಾಗೆಯೇ ನಾವು ಇಲ್ಲೂ ರೂಪಾದಿಗಳ ಮೇರೆಯನ್ನು ಹರಿದು ಅನಂತದ ಸೌಂದರ್ಯದವರೆಗೂ ಸಾಗಬೇಕು. ಇದು

ಯಾವತ್ತು ಧರ್ಮಗಳ ಉದ್ದೇಶ. ಅದರಿಂದ ಧಾರ್ಮಿಕ ಪಂಥಗಳ ಎಡೆಯಲ್ಲಿ ಈ ಸೌಂದರ್ಯೋಪಾಸನೆಯು ಇಲ್ಲದೆ ಕಲೆಯು ಸೇರಿಕೊಂಡಿವೆ.'

ಎಲ್ಲಿಯ ತನಕ ನಮ್ಮಲ್ಲಿನ ಉತ್ಪಾದಕ ಶಕ್ತಿಯನ್ನು ಬೆಳೆಸುವ ಗೋಜಿಗೆ ನಾವು ಹೋಗುವುದಿಲ್ಲವೋ, ಎಲ್ಲಿಯ ತನಕ ನಮ್ಮ ಭಾವನೆಗಳು ಕೋಮಲವಾಗಿ ಆಗುವುದಿಲ್ಲವೋ ಅಲ್ಲಿಯ ತನಕ ನಾವು ಬರೇ ಯಂತ್ರಗಳಾಗುವೆವು. ಮಾನವರಾಗಲಾರೆವು. ಜೀವನದ ಶೋಭೆಯು ಭಾವನೆಯ ಬೆಳವಣಿಗೆ, ವಿವೇಚನೆಯ ಬಿಗು ಇವುಗಳ ನಡುವೆ ಹರಿಯಬೇಕು.

ಕಾರಂತರು ಕಲೆಯ ಜಾಗೃತ ಪ್ರಜ್ಞೆಯಾಚೆಗಿನ ಆಯಾಮಗಳನ್ನೂ ಗಮನಿಸುತ್ತಾರೆ. ರೂಪ, ಆಕಾರಗಳಾಚೆ ಇರುವ ಸೌಂದರ್ಯವನ್ನು ಹುಡುಕುವುದು. ತತ್ವಜ್ಞಾನ, ಕಾವ್ಯಕ್ಷೇತ್ರಗಳಿಗೆ ಹೆಚ್ಚಾಗಿ ಅನ್ವಯವಾಗುವ ಈ ಶೋಧವನ್ನು ವೈಚಾರಿಕತೆಯೇ ವ್ಯಕ್ತಿತ್ವದ ಪ್ರಧಾನ ನೆಲೆಯಾಗಿರುವ ಕಾರಂತರು ಕೈಗೊಳ್ಳುವುದು ಅವರ ವ್ಯಕ್ತಿತ್ವಕ್ಕಿರುವ ಬಹುಮುಖೀ ಆಯಾಮವನ್ನು ತೋರಿಸುತ್ತದೆ.

ಇನ್ನೂ ಒಂದು ಹುಚ್ಚು ಮಾತನ್ನು ಕೇಳುತ್ತಿರುತ್ತೇವೆ. 'ಕಲೆ ಎಂದ ಮೇಲೆ ಎಲ್ಲರಿಗೂ ತಿಳಿಯಬೇಡವೇ' ಎಂಬ ಮಾತದು. ಎಲ್ಲರಿಗೂ ಒಂದೇ ಬಗೆಯ ಆಹಾರ ರುಚಿಸುತ್ತದೆಯೆ? ಯಾವುದು ಎಲ್ಲರಿಗೂ ರುಚಿಸೀತು? ಕಲೆಯನ್ನು ತಿಳಿಯುವುದಕ್ಕೂ ತಕ್ಕ ಸಂಸ್ಕಾರ ಬೇಕು. ಪರಿಪಾಠವೂ ಬೇಕು. ಕಲಾ ವಿಮರ್ಶೆಯ ಸೋಗನ್ನು ಹಾಕುವುದಕ್ಕೂ ಒಂದು ಶಿಕ್ಷಣ ಬೇಕು. ಹುಮಹಮು 1991

ಸಂಗೀತ, ನೃತ್ಯ – ಎಂದೊಡನೆಯೇ – ಕೇವಲ ಎರಡೋ ಮೂರೋ ಮಾರ್ಗಪದ್ಧತಿಗಳ ನೆನಪು ಮಾತ್ರ ಆಗಬೇಕಿಲ್ಲ. 'ಮಾರ್ಗ'ವೆಂಬ ಮುದ್ರಿಕೆ ಪಡೆಯದ, ಗಾಜಿನ ಮನೆಯಲ್ಲೇ ಬೆಳೆಯಿಸಿ ಪೋಷಿಸಲ್ಪಡದ ಹಲವಾರು ಗಿಡಮರಗಳೂ ನಮ್ಮ ಕಲ್ಪನಾ ಉದ್ಯಾನದ ಸಸ್ಯಗಳಾಗಬಲ್ಲವು. 407, ನಾಟಕ ಮಾಧ್ಯಮಗಳು, ಭಾರತೀಯ ಕಲಾ ದರ್ಶನ.

ಕಾರಂತರದ್ದು ಅರ್ಥಾನುಸಾರಿಯಾದ ಅಭಿವ್ಯಕ್ತಿಯನ್ನು ಒಪ್ಪುವ ಮನಸ್ಸು. ಸಾಹಿತ್ಯದ ಹಿನ್ನೆಲೆ ಇದಕ್ಕೆ ಕಾರಣವಿರಬಹುದು.

### ಈ ನಾಡಿನ ಪ್ರದರ್ಶನ ಕಲೆಗಳಿಗೆ ಕಾರಂತರ ಕೊಡುಗೆ

1. ಯಕ್ಷಗಾನ ಕಲೆಯನ್ನು ಪುನರುಜ್ಜೀವನಗೊಳಿಸುವಲ್ಲಿ ದೀರ್ಘಕಾಲದ ಪರಿಶ್ರಮ ಬೇಡಿದ ಮೌಲ್ಯಯುತವಾದ ಸಂಶೋಧನೆ ಮಾಡಿ, ಉದ್ಗ್ರಂಥ ರಚಿಸಿದರು. ಅಲ್ಲಿಗೇ ನಿಲ್ಲದೆ ಅದರ ಪ್ರದರ್ಶನದ ಎಲ್ಲ ಆಯಾಮಗಳನ್ನು ಕೂಲಂಕಷವಾಗಿ ಗಮನಿಸಿ ತಿದ್ದಿ ತೀಡಿ ಆ ಕಲೆಯು ಅಂತಾರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿ ಪಡೆಯುವಲ್ಲಿ ಮಹತ್ವದ ಪಾತ್ರ ವಹಿಸಿದರು.
2. ಗೀತನಾಟಕಗಳನ್ನು ಪ್ರಥಮ ಬಾರಿಗೆ ಬರೆದರು. ಅಣಕವಾಡುಗಳನ್ನು ರಚಿಸಿದರು. ಯಕ್ಷಗಾನ ಬಯಲಾಟ, ಭಾರತೀಯ ಚಿತ್ರಕಲೆ ಮುಂತಾದ ಮೌಲ್ಯಯುತವಾದ ಕಲಾ ಸಂಬಂಧೀ ಗ್ರಂಥಗಳನ್ನು ರಚಿಸಿದ್ದು.

3. ದೇಹ ಮತ್ತು ನೃತ್ಯಕಲೆಗಳ ಸಂಬಂಧವನ್ನು ಕುರಿತು ಸ್ವಂತ ಪ್ರಯೋಗಗಳೊಂದಿಗೆ ಚಿಂತನೆ ಮಾಡಿ ಅದನ್ನು ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದರು. ಅವರ ಆತ್ಮಕಥೆಯು ಅವರ ಕಲಾಪ್ರಯೋಗಗಳ ದಾಖಲೆಯೂ ಹೌದು.

4. ಇಳಿ ವಯಸ್ಸಿನಲ್ಲೂ ಚಟುವಟಿಕೆಯಿಂದಿದ್ದು ತಮ್ಮ ಶಿಷ್ಯರಿಗೆ ಮೇಲ್ಪಂಕ್ತಿಯಾಗಿ ಯಕ್ಷಗಾನವನ್ನು ಕುಣಿದು ತೋರಿಸುವ ಹುಮ್ಮಸ್ಸನ್ನಿಟ್ಟುಕೊಂಡು ಅನೇಕರಿಗೆ ಸ್ಫೂರ್ತಿಯಾದರು.

5. ನಾಟಕ ಮಾಧ್ಯಮದ ವಿಚಾರದಲ್ಲಿ ತಾವು 1964ರಲ್ಲಿ ಬರೆದ ಲೇಖನವೊಂದರಲ್ಲಿ ಕಾರಂತರು ಹೀಗೆ ಹೇಳುತ್ತಾರೆ. ನಾಟಕ ಬರೆಯುವವರು, ಪ್ರದರ್ಶಿಸುವವರು ತಮ್ಮ ದೃಷ್ಟಿಯನ್ನೇ ತಿದ್ದುಕೊಂಡು ಅದಕ್ಕೆ ಬೇಕಾದ ಅಭ್ಯಾಸ, ಶಿಕ್ಷಣ ಪಡೆದು ತಾವು ಅನುಸರಿಸುವ ಮಾಧ್ಯಮದ ಶಕ್ತಿಯೆಷ್ಟು, ಅದರ ಸಾಧ್ಯತೆಗಳು ಯಾವುವೆಲ್ಲ ಎಂದು ತಿಳಿಯುವ ತನಕವೂ, ನಾವು ಹೊತ್ತು ಕಳೆಯಲು ಏನಾದರೊಂದು ಹೊಸತೋ, ಹಾಸ್ಯವೋ, ಹೊಲಸೋ ವಸ್ತು ಇದ್ದರೆ ಸಾಕು – ಎನ್ನುವ ಜನರನ್ನೇ ದೂರಿ ಫಲವಿಲ್ಲ. ನಮ್ಮ ಪ್ರೇಕ್ಷಕ ವರ್ಗದ ಅಭಿರುಚಿ, ಮನಸ್ಸಿನ ಮಟ್ಟಗಳೆರಡೂ ಅಳೆಯಲು ಸಿಗದಿರುವ ವಸ್ತುಗಳಾಗಿಯೇ ಉಳಿದಿವೆ. ಅದನ್ನೇ ತಿಳಿದು ನಾವು ನಾಟಕ ಕಲೆ ಬೆಳೆಯಿಸಬೇಕಾದರೆ – ಯಾವುದರಿಂದ ಬೆಳೆಯಿಸಬೇಕೆಂಬ ಮಾಧ್ಯಮದ ಪರಿಚಯ ನಮಗೇ ಇಲ್ಲದೆ ಹೋದರೆ ಹೇಗಾದೀತು? ಅದೇ ಪು. 404 ಕಾರಂತರ ಈ ಮಾತುಗಳು ಇಂದಿನ ಧಾರಾವಾಹಿ ಮತ್ತು ಸಿನಿಮಾ ಲೋಕಕ್ಕೆ ಎಷ್ಟು ಚೆನ್ನಾಗಿ ಹೊಂದುತ್ತದೆಂದರೆ ಆಶ್ಚರ್ಯವೆನ್ನಿಸುತ್ತದೆ.

## ಇಂದಿಗೆ ಕಾರಂತರ ಕಲಾಚಿಂತನೆ ಮತ್ತು ಪ್ರಯೋಗಗಳ ಪ್ರಸ್ತುತತೆ

ಬಾಳು ಮತ್ತು ಕಲೆಯ ಸಂಬಂಧವನ್ನು ಕುರಿತು ಕಾರಂತರು ಚಿಂತಿಸಿರುವುದು ಇಂದೂ ನಾವು ಮಾಡಬೇಕಾದ ಕೆಲಸ. ಇವತ್ತು ನಮ್ಮ ಬಾಳಿನಲ್ಲಿ ಕಲೆಯ ಸ್ಥಾನಮಾನವೇನು.

ನಮ್ಮ ಸಂದರ್ಭದಲ್ಲಿ ರಾಕ್ಷಸೀಯವಾಗಿ ವಿಜೃಂಭಿಸುತ್ತಿರುವ ಕೊಳ್ಳುಬಾಕ ಸಂಸ್ಕೃತಿಯು ಕಲೆಯ ಕ್ಷೇತ್ರವನ್ನೂ ವ್ಯಾಪಿಸಿದೆ ಅನ್ನಿಸುತ್ತದೆ. ಕಲೆಯನ್ನು, ಮನಸ್ಸನ್ನು ಅರಳಿಸುವ ಶಕ್ತಿ, ಸೌಂದರ್ಯೋಪಾಸನೆಯ ದಾರಿ ಎಂಬುದನ್ನು ಮರೆತು ಅದನ್ನು ಟಿಆರ್‌ಪಿಗಳ ಹಂಗಿಗೆ ಒಪ್ಪಾಡುವ ಮೀಡಿಯಾ ಮಾರುಕಟ್ಟೆಯ ವಸ್ತುವಾಗಿಸಿದ್ದೇವೆ. ಸೇಡು, ಕಾಮವಾಂಛೆಗಳ ಪಾಶವೀ ಪ್ರವೃತ್ತಿಗಳನ್ನು ಗ್ಲಾಮರಸ್ ಆಗಿ ಎತ್ತಿ ಹಿಡಿಯುವ ವ್ಯಾಪಾರೀ ವಸ್ತುವಾಗಿಸಿದ್ದೇವೆ.

ಉದಾಹರಣೆಗೆ ಮಗಳನ್ನು ಕೊಂದ ತಾಯಿಯ ಕಥಾವಸ್ತುವನ್ನು ಚಿತ್ರಕಥೆಯಾಗಿ ಬರೆಯಿರಿ ಎಂದು ಲೇಖಕರನ್ನು ಪೀಡಿಸುವ ನಿರ್ಮಾಪಕ ಮಹಾಶಯರು ಇಂದು ಕಲಾ ನಿರ್ಮಾಪಕರ ಸ್ಥಾನಗಳಲ್ಲಿ ರಾರಾಜಿಸುತ್ತಿದ್ದಾರೆ.

ಕಾರಂತರು ಮಕ್ಕಳ ವಯಸ್ಸು, ಅನುಭವಗಳಿಗೆ ತಕ್ಕಂತಹ ಹಾಡುಗಳನ್ನು ಅವರಿಂದ ಹಾಡಿಸುವುದರ ಬಗ್ಗೆ ತುಂಬ ನಿರ್ದಿಷ್ಟವಾಗಿ ಚಿಂತಿಸಿದ್ದರು. ಇಂದಿನ ರಿಯಾಲಿಟಿ ಶೋಗಳಲ್ಲಿ

ಏನಾಗುತ್ತಿದೆ? ಅಲ್ಲಿನ ಮಕ್ಕಳ ವಯಸ್ಸಿಗೆ ಹೊಂದದ ಹಾಡು, ನೃತ್ಯಗಳು, ಅನಾರೋಗ್ಯಕರ ಸ್ಪರ್ಧಾತ್ಮಕತೆ ಅವರ ಮನಸ್ಸನ್ನು ಅರಳಿಸುವ ಬದಲು ಕೆರಳಿಸುವುದಿಲ್ಲವೇ. ಕಾರಂತರ ಚಿಂತನೆಯು ನಮ್ಮನ್ನು ಈ ನಿಟ್ಟಿನಲ್ಲಿ ಯೋಚಿಸುವಂತೆ ಮಾಡುತ್ತದೆ.

ಇನ್ನು ಶಾಸ್ತ್ರೀಯ ಕಲೆಗಳು ಶ್ರೀಮಂತರ ಸ್ವತ್ತಾಗುತ್ತಿದ್ದು ಭರತನಾಟ್ಯದ ಅರಂಗೇಟ್ರಂಗಳು ವೈಭವ ಪ್ರದರ್ಶನದ ಆರತಕ್ಷತೆಯಾಗುತ್ತಿವೆ. ಮಕ್ಕಳಿಗೆ ಕಲೆಯನ್ನು ಕಲಿಸುವುದು ಎಂದರೆ ಅವರು 'ಟೆನ್ತು, ಪಿಯುಸಿಯ ಟ್ಯೂಷನ್' ಎಂಬ ಬಾವಿಗೆ ಬೀಳುವಷ್ಟರಲ್ಲಿ ಮಾಡಿ ಮುಗಿಸಬೇಕಾದ ಶ್ರೀಮಂತರ ಮನೆಗಳ ಹವ್ಯಾಸಿ ಚಟುವಟಿಕೆಯಾಗುತ್ತಿವೆ. ಕಲೆ ಎಂಬುದು ಬಾಳನ್ನು ನಿತ್ಯವೂ ಬೆಳಗುವ ಅರಿವಿನ ನಂದಾದೀಪವಾಗುವ ಬದಲು ಶೋಕೇಸಿನಲ್ಲಿಡಲ್ಪಟ್ಟು ಧೂಳು ತಿನ್ನಬೇಕಾದ ಪ್ರತಿಷ್ಠಾ ಪಾರಿತೋಷಕವಾಗಿಬಿಟ್ಟಿದೆ. ಈ ವಿಚಾರದಲ್ಲಿ ಸ್ಪಷ್ಟವಾಗಿ ಆಲೋಚಿಸಲು ಕಾರಂತರ ಆಲೋಚನೆಗಳು ಸಹಾಯ ಮಾಡಬಲ್ಲವು.

ಕರ್ನಾಟಕದ ರವೀಂದ್ರನಾಥ ಟ್ಯಾಗೋರ್ ಎಂಬ ಸಕಾರಣವಾದ ಮನ್ನಣೆಯನ್ನು ಪಡೆದ ನಮ್ಮ ಪ್ರೀತಿಯ ಶಿವರಾಮ ಕಾರಂತರ ಕಲಾಸಕ್ತಿಯನ್ನು ಕುರಿತ ಪ್ರಬಂಧವನ್ನು ವಿ. ಸೀತಾರಾಮಯ್ಯನವರು ಇವರನ್ನು ಕುರಿತು ಬರೆದ ಕಾಲನಟ ಎಂಬ ಕವಿತೆಯ ಸಾಲುಗಳೊಂದಿಗೆ ಮುಕ್ತಾಯಗೊಳಿಸುವುದು ಸೂಕ್ತವೆನ್ನಿಸುತ್ತದೆ.

ಮೈಗೆ ಬಣ್ಣ ಬಳಿದುಕೊಂಡು ಕಾಗದಗಳ ಕುಚ್ಚನುಟ್ಟು
ಕಾಲಗೆಜ್ಜೆ ಝುಣರೆನುತಿರೆ ಕುಣಿಯುತಾನೆ
ಹೊಸತು ಕಾಲಪುರುಷನಿವನು ಕುಣಿಯುತಾನೆ
ದಿನಕೆ ನಾಲ್ಕು ಆಟ ಕಟ್ಟಿ ಆಡಿ ಹಾಡಿ ಮಾತನಾಡಿ
ತಾನು ದಣಿದು ಜೊತೆಯವರನು ದಣಿಸುತಾನೆ
ಹೊಸತು ಕಲೆಯ ಬೆಡಗನೆರಚಿ ಕುಣಿಯುತಾನೆ

ಚಿಗರಿಯಂತೆ ಜಿಗಿಯುತ್ತಾನೆ!
ಬುಗುರಿಯಂತೆ ತಿರುಗುತಾನೆ!
ದಿಸೆಯ ಬಾಚಿ ಹಿಂಡುತಾನೆ!
ಕ್ರಾಂತಿಗಿಟ್ಟು ತೊಳಸುತಾನೆ!

ಶಿವರಾಮ ಕಾರಂತರು ಕಲೆಯ ಕ್ಷೇತ್ರಕ್ಕೆ ಕೊಟ್ಟ ಕಾಣಿಕೆಯು ಅನೇಕ ಹೊಸತುಗಳಿಗೆ ಪ್ರೇರಣೆಯಾಗಲೆಂದು ಹಾರೈಸುತ್ತೇನೆ.

**(ದಿನಾಂಕ 11-10-2015ರಂದು ಬೆಂಗಳೂರಿನ ಆರ್.ಟಿ. ನಗರದ ತರಳಬಾಳು ಕೇಂದ್ರದಲ್ಲಿ ಶಿವರಾಮ ಕಾರಂತ ವೇದಿಕೆಯು ಏರ್ಪಡಿಸಿದ ಅವರ 114ನೇ ಹುಟ್ಟುಹಬ್ಬದ ಆಚರಣೆಯಲ್ಲಿ ಮಂಡಿಸಲಾದ ಪ್ರಬಂಧ)**

# ‘ಕಾಲದ ಮಹಿಮೆ’ಯಲ್ಲಿ ಕಾರಂತರು



ಶೂದ್ರ ಶ್ರೀನಿವಾಸ್

**“ಜಗತ್ತಿನ ದೊಡ್ಡ ಲೇಖಕರು ಮತ್ತು ಚಿಂತಕರುಗಳೆಲ್ಲ ಕಾಲದ ಮಹಿಮೆಯ ಬಗ್ಗೆ ಕಟ್ಟುನಿಟ್ಟಾದ ಚೌಕಟ್ಟನ್ನು ಹಾಕಿಕೊಂಡು ಬದುಕಿದವರು. ಕಾಲಕ್ಕೆ ಬೆಲೆಕೊಟ್ಟು ಜೀವನ ಮತ್ತು ಬರವಣಿಗೆಯಲ್ಲಿ ಒಂದು ಶಿಸ್ತನ್ನು ಬೆಳೆಸಿಕೊಂಡ ಶಿವರಾಮ ಕಾರಂತರು ಅಂಥ ಅನನ್ಯರಲ್ಲಿ ಒಬ್ಬರು.”**

“ಈ ಕೃತಿಗೆ ‘ಹುಚ್ಚು ಮನಸ್ಸಿನ ಹತ್ತು ಮುಖಗಳು’ ಎಂದು ಹೆಸರಿಸಿದ್ದೇನೆ. ತಂತಮ್ಮ ಮನಸ್ಸು ಹುಚ್ಚೆಂಬ ಅರಿವು ಎಲ್ಲ ಗಳಿಗೆಯಲ್ಲಿಯೂ ನಮಗೆ ಉಂಟಾಗುವುದಿಲ್ಲ. ಇನ್ನೊಬ್ಬರ ಹುಚ್ಚುತನ ನಮಗೆ ಕಾಣಿಸುವಷ್ಟು ಸುಲಭವಾಗಿ ನಮ್ಮದೇ ಹುಚ್ಚುತನ ನಮಗೆ ಕಾಣಿಸುತ್ತದೆಯೇ? ಕಾಣಬೇಕೆಂಬ ಆಸೆಯೇನೋ ನನಗಿದೆ. ನಾವಿರುವ ಸಮಾಜವನ್ನು ಬೇರೆಯಾಗಿ ನಿಂತು, ನೋಡಿ, ತಿಳಿಯಲೆತ್ನಿಸಿದಂತೆ ನನ್ನ ಬಾಳನ್ನೂ, ನೋಡಿ, ತಿಳಿಯಬೇಕೆಂದಿದ್ದೇನೆ. ಅಂಥ ನಿರೀಕ್ಷಣೆಯು ಸಾಧ್ಯವಾದರೆ, ಅದೊಂದು ಅಪೂರ್ವವಾದ ಸಂತೋಷ. ಹಾಗೆ ಅದು ಸಾಧ್ಯವಾಗಲು, ನನ್ನಲ್ಲಿರುವ ಹೆಮ್ಮೆಯನ್ನು ಬಿಡಲೇಬೇಕು. ಪರರ ಎದುರಿನಲ್ಲಿ ಸಂಭಾವಿತನಂತೆ ಮೆರೆಯಬೇಕೆಂಬ ದುರಾಸೆಯನ್ನೂ ಬಿಡಬೇಕು. ಅಲ್ಲದೆ, ನಮ್ಮನ್ನೇ ನಾವು ವಂಚಿಸುವ ಸ್ವಭಾವ ನಮ್ಮಲ್ಲಿರುತ್ತದೆ. ಮನುಷ್ಯ ತನ್ನನ್ನು ಯಶಸ್ವಿಯಾಗಿ ವಂಚಿಸಲು ಕಲಿತ ಮೇಲೆಯೇ, ಜಗತ್ತನ್ನು ವಂಚಿಸುವುದಕ್ಕೆ ಶಕ್ತನಾಗುತ್ತಾನೆ ಎಂಬುದು ಒಂದು ಮಾತು. ನಮ್ಮ ಆಳ ನಮಗೇ ತಿಳಿಯುವುದಿಲ್ಲ. ನಮ್ಮ ಅಲ್ಪತನ ನಮಗೇ ಕಾಣಿಸುವುದಿಲ್ಲ. ನಮ್ಮಲ್ಲಿ ಇರುವ ಅಥವಾ ಇಲ್ಲದ ಸ್ವಲ್ಪ ಗುಣಗಳು ಬಹಳ ದೊಡ್ಡದಾಗಿಯೇ ಕಾಣಿಸುತ್ತದೆ.”

ಜಗತ್ತಿನ ದೊಡ್ಡ ಲೇಖಕರು ಮತ್ತು ಚಿಂತಕರುಗಳೆಲ್ಲ ಕಾಲದ ಮಹಿಮೆಯ ಬಗ್ಗೆ ಕಟ್ಟುನಿಟ್ಟಾದ ಚೌಕಟ್ಟನ್ನು ಹಾಕಿಕೊಂಡು ಬದುಕಿದವರು. ಕಾಲಕ್ಕೆ ಬೆಲೆಕೊಟ್ಟು ಜೀವನ ಮತ್ತು ಬರವಣಿಗೆಯಲ್ಲಿ ಒಂದು ಶಿಸ್ತನ್ನು ಬೆಳೆಸಿಕೊಂಡ ಶಿವರಾಮ ಕಾರಂತರು ಅಂಥ ಅನನ್ಯರಲ್ಲಿ ಒಬ್ಬರು.

ಈ ಸಾಲುಗಳು ಶಿವರಾಮ ಕಾರಂತರ ಹುಚ್ಚು ಮನಸ್ಸಿನ ಹತ್ತು ಮುಖಗಳು ಕೃತಿಯಿಂದ ತೆಗೆದು ದಾಖಲಿಸಿರುವಂಥದ್ದು. ನನಗೆ ಅವರ ಕೆಲವು ಕಾದಂಬರಿಗಳಷ್ಟೇ ಈ ಕೃತಿಯೂ ಅತ್ಯಂತ ಪ್ರಿಯವಾದದ್ದು. ಒಬ್ಬ ದೊಡ್ಡ ಲೇಖಕನ ಮನಃಸ್ಥಿತಿಯನ್ನು ಗ್ರಹಿಸಿಕೊಳ್ಳುವುದಕ್ಕೆ ಮತ್ತೆ ಮತ್ತೆ ಓದಬೇಕಾದಂಥದ್ದು. ಜಗತ್ತಿನ ಕೆಲವೇ ಅದ್ಭುತ ಜೀವನ ಚರಿತ್ರೆಗಳಲ್ಲಿ ಒಂದಾದ ಬಾಸವೆಲ್‌ನ ಸ್ಯಾಮ್ಯುಯಲ್ ಜಾನ್ಸನ್ ಕುರಿತ ಕೃತಿಯಲ್ಲಿನ ವಿವರಗಳಷ್ಟೇ. ಕಾರಂತರ ಈ ಮೇಲಿನ ಕೃತಿಯು ಒಳಗೊಂಡಿರುವ ವಿವರಗಳು ಅಪೂರ್ವವಾದದ್ದು. ಬಹಳಷ್ಟು ಕಡೆ ಪ್ರಸ್ತಾಪಿಸಿರುವೆ. ಈ ರೀತಿಯ ಪ್ರಾಮಾಣಿಕ ಮನಃಸ್ಥಿತಿ ಇದ್ದುದರಿಂದಲೇ ಕಾರಂತರು 'ಮೈಮನಗಳ ಸುಳಿಯಲ್ಲಿ' ರೀತಿಯ ಕಾದಂಬರಿಯನ್ನು ಬರೆಯಲು ಸಾಧ್ಯವಾಗಿದ್ದು ಎಂದು. ಯಾಕೆಂದರೆ, ಅಂಥ ಮನಸ್ಸುಗಳನ್ನು ಅವರು ಒಳಗೆ ಬಿಟ್ಟುಕೊಂಡಿದ್ದರು. ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದ ಬಹುದೊಡ್ಡ ಧ್ವನಿಗಳೆಂದರೆ ಕುವೆಂಪು, ಕಾರಂತರು, ಗೋಪಾಲಕೃಷ್ಣ ಅಡಿಗ, ಅನಂತಮೂರ್ತಿ, ಲಂಕೇಶ್ ಮತ್ತು ತೇಜಸ್ವಿ. ಈ ಧ್ವನಿಯು ನೈತಿಕವಾಗಿ ಕೂಡ ಒಂದು ದೊಡ್ಡ ಸಂಚಲನ ಮೂಡಿಸಿದಂಥದ್ದು. ಈಗಲೂ ನಮ್ಮಲ್ಲಿ ಗ್ರಹಿಕೆಗಳು ಭಿನ್ನಭಿನ್ನ ಅರ್ಥಸಾಧ್ಯತೆಗಳ ಮೊರೆ ಹೊಗುತ್ತಿರುವುದು ಈ ಹಿರಿಯರ ಚಿಂತನೆಗಳ ಮೂಲಕವೇ. ಇಂಥ ಅಪೂರ್ವರಲ್ಲಿ ಒಬ್ಬರಾದ ಕಾರಂತರನ್ನು ಭೇಟಿಯಾದಾಗಲೆಲ್ಲ ರೋಮಾಂಚನ ಅನುಭವಿಸಿದ್ದೇನೆ. ನಾನು ಕಾಲೇಜಿನಗೆ ಬರುವ ಮುನ್ನವೇ ಕಾರಂತರ 'ಮರಳಿ ಮಣ್ಣಿಗೆ' ಮತ್ತು ಶರಶ್ಚಂದ್ರ ಚಟರ್ಜಿಯವರ 'ಶ್ರೀಕಾಂತ' ವಿಚಿತ್ರ ಪ್ರಭಾವವನ್ನು ಬೀರಿದ ಕಾದಂಬರಿಗಳು, ವಯೋಗುಣಕ್ಕೆ ಅನುಗುಣವಾಗಿ ಭಾವನಾತ್ಮಕವಾಗಿ ತಲ್ಲಣಗೊಳಿಸಿದ್ದವು. ಆದರೆ ಮುಂದೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್‌ಗೆ ಸೇರಿಕೊಂಡ ವರ್ಷ ಯಾರ್ಯಾರೋ ಸಾಹಿತ್ಯ ಲೋಕದ ಪ್ರಾತಃ ಸ್ಮರಣೀಯರು ಮುಖಾಮುಖಿಯಾಗಲು ಸಾಧ್ಯವಾಗಿದ್ದು ಕೂಡ 'ಹಾಯ್' ಧ್ವನಿಯನ್ನು ಮನಸ್ಸಿನಲ್ಲಿ ತುಂಬಿಕೊಳ್ಳಲು ಅವಕಾಶ ದೊರಕಿತು. ಆನರ್ಸ್‌ಗೆ ಸೇರಿಕೊಂಡ ವರ್ಷವೇ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ 'ಸುವರ್ಣ ಮಹೋತ್ಸವ' ಇತ್ತು. ಮೂರು ದಿವಸ ಚೇತೋಹಾರಿಯಾದ ಕಾರ್ಯಕ್ರಮಗಳು. ಈ ಸಂಘವನ್ನು ಕಟ್ಟಿ ಬೆಳೆಸಿದವರು ಎ.ಆರ್. ಕೃಷ್ಣಶಾಸ್ತ್ರಿಗಳು ಮತ್ತು ಜಿ.ಪಿ. ರಾಜರತ್ನಂ ಅವರು. ಜಿ.ಪಿ.ಆರ್. ಅವರು ಎಂಥ ಸ್ಮರಣೀಯ ಪ್ರಾಧ್ಯಾಪಕರೋ, ಅಷ್ಟೇ ಅದ್ಭುತ ಸಂಘಟಕರು. ಸುವರ್ಣ ಮಹೋತ್ಸವದ ಸಮಯದಲ್ಲಿ ಪುಟ್ಟ ಹುಡುಗರಂತೆ ನಮ್ಮನ್ನು ನಾಚಿಸುವ ರೀತಿಯಲ್ಲಿ ಕ್ರಿಯಾಶೀಲರಾಗಿದ್ದರು. ಇವರಿಗೆ ಬೆಂಬಲಿಗರಾಗಿ ಪ್ರೊ. ಮುಗಳಿಯವರು ಮತ್ತು ಪ್ರೊ। ಜಿ.ಎಸ್. ಶಿವರುದ್ರಪ್ಪನವರು. ಪ್ರೊ. ಜಿ.ಎಸ್.ಎಸ್. ಅವರು ಅದೇ ವರ್ಷ ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಇಲ್ಲಿಯ ಕನ್ನಡ ವಿಭಾಗಕ್ಕೆ ರೀಡರ್ ಆಗಿ ಬಂದಿದ್ದರು. ಅಧ್ಯಾಪಕರಾಗಿ ಡಾ। ಕೆ. ಮರುಳಸಿದ್ಧಪ್ಪನವರು ಮತ್ತು ಡಾ। ಲಕ್ಷ್ಮೀನಾರಾಯಣ ಭಟ್ಟರು ನಮಗೆ ಪ್ರಿಯರಾಗಿದ್ದರು. ಉತ್ಸವದಲ್ಲಿ ನಾನಾ ರೀತಿಯ ವಿಚಾರ ಸಂಕಿರಣಗಳು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು. ಒಂದು ಗೋಷ್ಠಿಯ ಅಧ್ಯಕ್ಷತೆಯನ್ನು ಶಿವರಾಮ ಕಾರಂತರು ವಹಿಸಿದ್ದರು. ಅದರಲ್ಲಿ ಪ್ರಬಂಧ ಮಂಡಿಸಿದವರು ಪ್ರೊ। ಶ್ಯಾಮಭಟ್ಟರು ಮತ್ತು ಲಂಕೇಶ್ ಅವರು.

ಲಂಕೇಶ್ ಅವರು ತಮಗೆ ಕೊಟ್ಟ ಸಮಯಕ್ಕಿಂತ ಸ್ವಲ್ಪ ಹೆಚ್ಚು ಸಮಯವನ್ನು ತೆಗೆದುಕೊಂಡರು. ಕಾರಂತರು ಕಾಲದ ಚೌಕಟ್ಟಿನಲ್ಲಿ ಮೊದಲನೆಯ ಗಂಟೆ ಬಾರಿಸಿದರು. ಲಂಕೇಶ್ ಅವರು ಮುಗಿಸಲಿಲ್ಲ. ಮತ್ತೆ ಜೋರಾಗಿ ಗಂಟೆ ಬಡಿದುಕೊಳ್ಳ ತೊಡಗಿತು. ಲಂಕೇಶ್ ಅವರು ಸಿಟ್ಟಿನಿಂದ ಪ್ರಬಂಧವನ್ನು ಪೂರ್ತಿ ಮುಗಿಸದೆ ಎಡಗೈಯಲ್ಲಿ ಕಾರಂತರಿಗೆ ಕೊಡಲು ಹೋದರು. ಕಾರಂತರೂ ಅಷ್ಟೇ ಎಡಗೈಯಲ್ಲಿ ಸ್ವೀಕರಿಸಿ ಪಕ್ಕಕ್ಕಿಟ್ಟರು. ಅಂದು ಕಾರಂತರ ಅಧ್ಯಕ್ಷ ಭಾಷಣ ಕಾಲದ ಮಹಿಮೆಯನ್ನು ಕುರಿತದ್ದಾಗಿತ್ತು. 'ನನ್ನ ಬದುಕಿನಲ್ಲಿ ಕಾಲಕ್ಕೆ, ಸಮಯಕ್ಕೆ ಬೆಲೆಕೊಟ್ಟು ಒಂದು ರೀತಿಯ ಶಿಸ್ತನ್ನು ಬೆಳೆಸಿಕೊಂಡು ಬಂದಿದ್ದೇನೆ' ಎಂದು ಎಷ್ಟು ಅಮೋಘವಾಗಿ ಮಾತಾಡತೊಡಗಿದ್ದರು. ನಾನು 'ಕಾಲ' ಕುರಿತು ಕೇಳಿದ ಮಹತ್ವಪೂರ್ಣವಾದ ಉಪನ್ಯಾಸ ಅದು. ಕಿಕ್ಕಿರಿದು ತುಂಬಿದ್ದ ಸಭಾಂಗಣದಲ್ಲಿ ಬಿಟ್ಟು ಉಪನ್ಯಾಸವನ್ನು ಆಲಿಸಿದ್ದರು. ಮೊದಲೇ ಕಾರಂತರ ಮಾತು ಸೊಗಸು. ಅಂದಿನ ಮಾತು ಮತ್ತಷ್ಟು ಸೊಗಸು. ಅಂದಿನ ಮಾತು ಮತ್ತಷ್ಟು ತೀವ್ರತೆಯನ್ನು ಪಡೆದಿತ್ತು. ನನಗಂತೂ ಒಂದು ರೀತಿಯ ರೋಮಾಂಚಕ ಅನುಭವ. ಇದರ ಜೊತೆಗೆ ಎಲ್ಲಿ ಲಂಕೇಶ್ ಅವರು ಕಾರಂತರೊಡನೆ ವಾಗ್ವಾದಕ್ಕೆ ಇಳಿದು ಬಿಡುವರೋ ಎಂಬ ಆತಂಕವಿತ್ತು. ಆದರೆ ಅವರು ಮೌನವಾಗಿ ಸಿಗರೇಟು ಸೇದುತ್ತ ಕೂತಿದ್ದರು. ಸಂಜೆ ಲಂಕೇಶ್ ಅವರನ್ನು ಕಿ.ರಂ. ನಾಗರಾಜ್ ಮತ್ತು ನಾನು ಭೇಟಿಯಾದಾಗ, 'ಏನಯ್ಯ ಆ ಕಾರಂತರು' ಅಂದರು ಅಷ್ಟೇ. ನಾವು ಮೌನಿಗಳಾದೆವು. ಸುವರ್ಣ ಮಹೋತ್ಸವದಲ್ಲಿ ಇದೂ ಕೂಡ ವಿದ್ಯಾರ್ಥಿಗಳ ನಡುವೆ ಮತ್ತು ಅಧ್ಯಾಪಕರ ನಡುವೆ ಮಾತುಕತೆಗೆ ವಸ್ತುವಾಗಿತ್ತು. ಇದಾದ ಕೆಲವು ದಿವಸಗಳಾದ ಮೇಲೆ ಒಮ್ಮೆ ಹೀಗೆಯೇ ಕೂತಿರುವಾಗ 'ಕಾರಂತರ ಆ ಭಾಷಣ ನಿಜವಾಗಿಯೂ ಮಾರ್ಮಿಕವಾದದ್ದು.' ಎಂದು ಸಿಗರೇಟಿನ ಹೊಗೆಯ ಮಧ್ಯೆ ಮೌನಿಯಾದರು. ನಾನು ಸ್ವಲ್ಪ ಧೈರ್ಯದಿಂದಲೇ 'ಆ ಮಾರ್ಮಿಕ ಉಪನ್ಯಾಸಕ್ಕೆ ವಸ್ತು ಒದಗಿಸಿದವರು ನೀವು' ಎಂದೆ. ಅವರು ಏನೂ ಮಾತಾಡಲಿಲ್ಲ. ಲಂಕೇಶ್ ಅವರು ಅತ್ಯಂತ ಮಿತಭಾಷಿಯಾಗಿದ್ದರಿಂದ ಮೌನವನ್ನು ಹೆಚ್ಚು ಗೌರವಿಸುತ್ತಿದ್ದರು. ಹಾಗೆಯೇ ತಮ್ಮ ಆಪ್ತರು ಕೆಲವು ಆಕ್ಷೇಪಣೆಗಳನ್ನೆತ್ತಿದರೆ ಪ್ರತಿಕ್ರಿಯಿಸುತ್ತಿರಲಿಲ್ಲ. ಬಹಳ ಹೆಚ್ಚೆಂದರೆ, ಅರ್ಥ ಪ್ರೀತಿ ಮತ್ತು ಸಿಟ್ಟಿನಿಂದ 'ಕತ್ತೆಗಳು' ಎಂದು ಸುಮ್ಮನಿದ್ದು ಬಿಡುತ್ತಿದ್ದರು. ಮುಂದೆ ವಿಚಿತ್ರ ಟರ್ನಿಂಗ್ ಪಾಯಿಂಟ್ ಎಂದರೆ, ಲಂಕೇಶ ಅವರು 'ಕಾಲ'ದ ಬಗ್ಗೆ ಅರ್ಥಾತ್ ಸಮಯ ಪರಿಪಾಲನೆ ಬಗ್ಗೆ ಅತ್ಯಂತ ನಿರ್ದಾಕ್ಷಿಣ್ಯತೆಯನ್ನು, ಒಂದು ಅರ್ಥದಲ್ಲಿ ನಿಷ್ಠೆಯನ್ನು ಬೆಳೆಸಿಕೊಂಡರು. ಎಲ್ಲವೂ ಸಮಯಕ್ಕೆ ಸರಿಯಾಗಿ ಆಗಬೇಕೆಂಬುದು ಬಹುಮುಖ್ಯವಾಗತೊಡಗಿತು.

ಜಗತ್ತಿನ ದೊಡ್ಡ ಲೇಖಕರು ಮತ್ತು ಚಿಂತಕರೆಲ್ಲ 'ಕಾಲದ ಮಹಿಮೆ'ಯ ಬಗ್ಗೆ ಕಟ್ಟುನಿಟ್ಟಾದ ಚೌಕಟ್ಟನ್ನು ಹಾಕಿಕೊಂಡು ಬದುಕಿದವರು. ಮನೋವಿಜ್ಞಾನಿ ಫ್ರಾಯ್ಡ್ ಬಗ್ಗೆ ಖ್ಯಾತ ವಿದ್ವಾಂಸರಾದ ಪ್ರೊ| ಸುನಿಲ್ ಕುಮಾರ್ ಬ್ಯಾನರ್ಜಿಯವರ ಒಂದು ಲೇಖನವಿದೆ. ಫ್ರಾಯ್ಡ್ ಅವರು ತಮ್ಮನ್ನು ಭೇಟಿಯಾಗಲು ಬರುವವರು ಐದು ನಿಮಿಷ ತಡವಾಗಿ ಬಂದರೂ ವಾಪಸ್ಸು ಕಳಿಸಿಬಿಡುತ್ತಿದ್ದರಂತೆ. ಹಾಗೆಯೇ ಐದು ನಿಮಿಷ ಮುಂಚಿತವಾಗಿ ಹೋದರೂ ಒಳಗೆ ಬಿಟ್ಟುಕೊಳ್ಳುತ್ತಿರಲಿಲ್ಲವಂತೆ. ಶಿವರಾಮ ಕಾರಂತರ ದೃಷ್ಟಿಯಿಂದ

ಹೇಳಬೇಕೆಂದರೆ, ಅವರು ಎಷ್ಟು ನಿರ್ದಾಕ್ಷಿಣ್ಯ ಸ್ವಭಾವದ ವ್ಯಕ್ತಿಯೋ ಅಷ್ಟೇ ಮೃದು ಸ್ವಭಾವದವರಾಗಿದ್ದರು. ಅವರ ಒಟ್ಟು ಬರವಣಿಗೆ ಮತ್ತು ವ್ಯಕ್ತಿತ್ವ ನೋಡಿ ನಾನೇ ಅವರಿಗೆ ಒಂದೆರಡು ವರ್ಷ ಒಡನಾಡಿಯಾಗಿ ಜೀವನ ಚರಿತ್ರೆ ಬರೆಯುವ ಆಸೆ ಇತ್ತು. ಇದನ್ನು ಉಡುಪಿಯ ಗೆಳೆಯರಾದ ಮುರಾರಿ ಬಲ್ಲಾಳರ ಬಳಿ ಪ್ರಸ್ತಾಪಿಸಿದ್ದೆ. 'ಇಂಥ ಕಾಲದ ಮಹಿಮೆ' ಕುರಿತು ಅನನ್ಯತೆ ಬೆಳೆಸಿಕೊಂಡ ಕಾರಂತರು ಕೇರಳದ ಕೊಚ್ಚಿನ್‌ನಲ್ಲಿ ಒಂದು ಸ್ಮರಣೀಯ ಅರ್ಥಾತ್ ಚಾರಿತ್ರಿಕ ಉಪನ್ಯಾಸವನ್ನು ಕೊಟ್ಟರು. ಅದು ತುರ್ತು ಪರಿಸ್ಥಿತಿ ವಿರೋಧಿ ಲೇಖಕರ ರಾಷ್ಟ್ರೀಯ ಮಟ್ಟದ ಸಮಾವೇಶ. ಅದರ ಅಧ್ಯಕ್ಷತೆಯನ್ನು ಹಿರಿಯ ರಾಜಕೀಯ ಮುತ್ಸದ್ದಿ ಮತ್ತು ಲೇಖಕರಾದ ಇ.ಎಂ.ಎಸ್. ನಂಬುದರಿಪಾದ ಅವರು ವಹಿಸಿದ್ದರು. ಸುಮಾರು ಒಂದು ಗಂಟೆ ಎಂಥ ಅಮೋಘವಾದ ಉಪನ್ಯಾಸ. ನಂತರ ಇ.ಎಂ.ಎಸ್. ಅವರು ಮಾತಾಡುತ್ತ ನಮ್ಮ ನಡುವೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಹಾಗೂ ಸಾಹಿತ್ಯಿಕವಾಗಿ ಅತ್ಯಂತ ಗಂಭೀರವಾಗಿ ಮಾತಾಡುವ ಒಬ್ಬ ಲೇಖಕರಿದ್ದಾರೆಂಬುದೇ ಮಹತ್ವಪೂರ್ಣವಾದದ್ದು ಎಂದು ಗುಣಗಾನ ಮಾಡಿದ್ದರು. ನಂತರ ಒಂದೆರಡು ಗಂಟೆ ಆಪ್ತ ಮಾತುಕತೆ ಇತ್ತು. ಆ ಸಂದರ್ಭದಲ್ಲಿ ಡಾ। ಸಿದ್ಧಲಿಂಗಯ್ಯ, ಡಿ.ಆರ್. ನಾಗರಾಜ್ ಮತ್ತು ನಾನು ಎಷ್ಟು ಖುಷಿಪಟ್ಟಿದ್ದೆವು. ಹಾಗೆಯೇ ಈ ತ್ರಿಲೋಕ ಸಂಚಾರಿಯನ್ನು ಕೊಂಡಾಡಿದ್ದೆವು.

ಈ 'ಕಾಲ'ದ ಮಹಿಮೆಯ ಹಿರಿಯರ ಕಾರಣಕ್ಕಾಗಿ 1986ರಲ್ಲಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಕಾರ್ಯಕ್ರಮವಿತ್ತು. ಕಾರಂತರು ಮುಖ್ಯ ಅತಿಥಿಗಳಾಗಿದ್ದರು. ಅಂದಿನ ಮುಖ್ಯಮಂತ್ರಿಗಳಾದ ರಾಮಕೃಷ್ಣ ಹೆಗ್ಗಡೆಯವರು ಅಧ್ಯಕ್ಷತೆಯನ್ನು ವಹಿಸಿದ್ದರು. ನಾನು ಕನಸಿಗೊಂದು ಕಣ್ಣು ಕೃತಿಗೆ ಬೇರೆ ಬೇರೆ ಪ್ರಶಸ್ತಿ ವಿಜೇತರ ಜೊತೆಗೆ ಕಾರಂತರಿಂದ ಪ್ರಶಸ್ತಿ ಸ್ವೀಕರಿಸಿದ್ದೆ. ಆಗ ಗೆಳೆಯ ಗೌರೀಸುಂದರ್ ಅವರು ತೆಗೆದಿರುವ ಒಂದು ಚಿತ್ರ ನನ್ನ ಕೊಠಡಿಯ ಮೇಜಿನ ಮೇಲೆ ಕಂಗೊಳಿಸುತ್ತಿದೆ. ಆಗ ತಮ್ಮ ಸಾಹಿತ್ಯ ಮತ್ತು ಪ್ರಶಸ್ತಿಗಳು ಕುರಿತು ಅತ್ಯಂತ ಮಾರ್ಮಿಕವಾಗಿ ಮಾತಾಡಿದ್ದರು. ಕಾರಂತರು ಯು.ಆರ್. ಅನಂತಮೂರ್ತಿಯವರ ರೀತಿಯಲ್ಲಿ ಬಹು ದೊಡ್ಡ ಭಾಷಣಕಾರರಾಗಿದ್ದರಿಂದ ಯಾವುದನ್ನೇ ಆಗಲಿ ಗಂಭೀರವಾಗಿ ಮಾತಾಡುತ್ತಿದ್ದರು. ಇಂಥ ಮತ್ತೊಂದು ಉಪನ್ಯಾಸವನ್ನು ಕೇಳಿದ್ದು, ಕೇರಳದ ಆಳ್ವೆಯಲ್ಲಿ. 1994ರಲ್ಲಿ ಅನಂತಮೂರ್ತಿಯವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಒಂದು ಗುಣಾತ್ಮಕವಾದ ಸಮಾವೇಶವನ್ನು ಏರ್ಪಡಿಸಿದ್ದರು. ಅದರಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದು ಬದುಕಿರುವ ಎಲ್ಲಾ ಲೇಖಕರು ಭಾಗವಹಿಸುವಂತೆ ವ್ಯವಸ್ಥೆ ಮಾಡಿದ್ದರು. ತಕಳಿ ಶಿವಶಂಕರ ಪಿಳ್ಳೆಯವರು ಉದ್ಘಾಟನೆ ಮಾಡಿದರೆ ಕಾರಂತರು ಸಮಾರೋಪ ಭಾಷಣ ಮಾಡಿದರು. ಇದರಲ್ಲಿ ಸುನೀಲ್ ಗಂಗೋಪಾಧ್ಯಾಯ, ನಿರ್ಮಲ ವರ್ಮಾ, ಇಂದಿರಾ ಗೋಸ್ವಾಮಿ, ಪ್ರತಿಭಾ ರಾಯ್, ನವನೀತ್ ಸೇನ್, ವಾಸುದೇವನ್ ನಾಯರ್, ಕಮಲಾದಾಸ್, ಸಿ. ನಾರಾಯಣ ರೆಡ್ಡಿ, ಉಚಲ್ಯಾ ಕಾದಂಬರಿಯ ಲಕ್ಷ್ಮಣ ಗಾಯಕವಾಡ ಮುಂತಾದವರೆಲ್ಲ ಭಾಗವಹಿಸಿದ್ದರು. ಕರ್ನಾಟಕದಿಂದ ಪ್ರೊ. ಜಿ.ಎಸ್. ಶಿವರುದ್ರಪ್ಪ, ರಾಮಚಂದ್ರಶರ್ಮ, ಶಾಂತಿನಾಥ ದೇಸಾಯಿ,

ಕೆ. ಮರುಳಸಿದ್ದಪ್ಪ, ಟಿ.ಆರ್. ನಾಗರಾಜ್, ಡಾ| ಸಿದ್ಧಲಿಂಗಯ್ಯ, ಪ್ರತಿಭಾ ನಂದಕುಮಾರ್ ಭಾಗವಹಿಸಿದ್ದರು. 'ಕಾಲದ ಮಹಿಮೆ'ಯಲ್ಲಿ ಇವೆಲ್ಲವನ್ನೂ ನೆನಪು ಮಾಡಿಕೊಳ್ಳುವುದಕ್ಕೆ ಎಷ್ಟು ಶ್ರೀಮಂತವಾಗಿರುತ್ತದೆ!

ಪೆರಿಯಾರ್ ನದಿಯ ದಡದಲ್ಲಿ ಒಂದು ಪುರಾತನವಾದ ಅರಮನೆಯಲ್ಲಿ ನಮ್ಮೆಲ್ಲರ ವಸತಿಯ ವ್ಯವಸ್ಥೆಯಾಗಿತ್ತು. ಅನಂತಮೂರ್ತಿಯವರು ಕೇರಳದ ಲೇಖಕರ ಸಹಕಾರದಿಂದ ಎಷ್ಟು ಚೆನ್ನಾಗಿ ವ್ಯವಸ್ಥೆ ಮಾಡಿದ್ದರು. ಸಮಾರೋಪ ಭಾಷಣಕ್ಕಿಂತ ಮೊದಲು ಮಧ್ಯಾಹ್ನ ಎರಡು ಗಂಟೆಯ ಸಮಯ. ಕಾರಂತರು ಊಟ ಮಾಡುತ್ತಿದ್ದರು. ಆಗ ಅವರನ್ನು ನೋಡಲು ವಾಸುದೇವನ್ ನಾಯರ್, ಶಾಂತಿನಾಥ ದೇಸಾಯಿ, ಇಂದಿರಾ ಗೋಸ್ವಾಮಿ, ಕಮಲಾದಾಸ್ ಮುಂತಾದವರು ಬಂದರು. ಎಲ್ಲರೂ ಸ್ವಲ್ಪ ದೂರದಲ್ಲಿ ಕೂತಿದ್ದರು. ಕಾರಂತರನ್ನು ನೋಡಿಕೊಳ್ಳುತ್ತಿದ್ದ ಶ್ರೀಪತಿ ತಂತ್ರಿಯವರ ಬಳಿ ನಾನು 'ಕಾರಂತರಿಗೆ ನಾನು ಸ್ವಲ್ಪ ಬಡಿಸಲಾ' ಎಂದು ಮೆಲುದನಿಯಲ್ಲಿ ಕೇಳಿದೆ. ಕಾರಂತರು ನಗುತ್ತ 'ಬಡಿಸಯ್ಯಾ'. ಹೂದ್ದ ಬಡಿಸುವುದರಿಂದ ಒಂದು ತುತ್ತು ಜಾಸ್ತಿ ತಿನ್ನಬಹುದು. ನಿನ್ನ 'ಕನಸಿಗೊಂದು ಕಣ್ಣು'ವಿಗೂ ವಸ್ತು ದೊರಕಿದಂತಾಗುವುದು ಎಂದು ತಮಾಷೆ ಮಾಡಿದ್ದರು. ಆದರೆ ನಾನಂತೂ ಅವರಿಗೆ ಮೊಸರಿಗೆ ಅನ್ನ ಬಡಿಸಿ, ಸ್ವಲ್ಪ ಮೊಸರು ಹಾಕಿದೆ. 'ಸಾಕಪ್ಪ ಶ್ರೀನಿವಾಸ್' ಎಂದರು. ಒಂದಿನ ದಿವಸ ನಾನು ಇಂದಿರಾ ಗೋಸ್ವಾಮಿಯವರ 'ಲಿಪ್‌ಸ್ಟಿಕ್' ಬಗ್ಗೆ ಏನೋ ಕೇಳಿದ್ದೆ. ಅವರು ಸಿಟ್ಟಿನಿಂದ ಬೈದು ಅನಂತಮೂರ್ತಿಯವರಿಗೆ ದೂರಿ ಹೇಳಿದ್ದರು. ಅವರು ಹೌದೇನೋ ಎಂದು ನಗುತ್ತ ಮುಂದೆ ನಡೆದಿದ್ದರು. ಅಂಥ ಕಥಾನಾಯಕಿ ಮಿಕಿ ಮಿಕಿ ನೋಡುತ್ತಿದ್ದರು. ಸಂಜೆ ಸಮಾರೋಪ ಸಮಯದಲ್ಲಿ ಭಾರತೀಯ ಸಾಹಿತ್ಯ ಲೋಕದ ಇಬ್ಬರು ಮಹಾನ್ ವ್ಯಕ್ತಿಗಳು ಸರಸ ಸಲ್ಲಾಪದಲ್ಲಿ ತೊಡಗಿದ್ದರು. ಆಗ ಎಷ್ಟೊಂದು ಕ್ಯಾಮರಾಗಳು ಅವರನ್ನು ಸುತ್ತುವರೆದಿದ್ದವು. ನಿರ್ಮಲ ವರ್ಮ ಅವರು 'ಹೌ ಬ್ಯೂಟಿಫುಲ್' ಎಂದು ಉದ್ಗಾರ ತೆಗೆದಿದ್ದರು.

(ಕೃಪೆ–'ಕಸ್ತೂರಿ' ಜನವರಿ 2015)

**ತಿದ್ದುಪಡಿ**

ಆಗಸ್ಟ್ 2015ರ ಸಂಚಿಕೆಯಲ್ಲಿ ಶ್ರೀ ಎನ್. ಶೇಖರರವರ ಕವನದ ಶೀರ್ಷಿಕೆ "ಸಪ್ಪಳ"ದ ಮೊದಲ ಸಾಲು "ಬಸವನ ಹುಳುವಿನ" ಕೈತಪ್ಪಿನಿಂದ ಬಿಟ್ಟು ಹೋಗಿದೆ. ನಮ್ಮಿಂದಾದ ತಪ್ಪಿಗೆ ವಿಷಾದಿಸುತ್ತೇವೆ.

– ಸಂಪಾದಕ

# ಕಾಣದ ಕೈಗಳು

ಡಾ। ಆರ್.ಆರ್. ಪಾಂಗಾಳ

ಇತ್ತೀಚೆಗೆ ಅಪರೂಪವಾಗಿ ಟಿ.ವಿ.ಯಲ್ಲಿ ಕನ್ನಡ ಚಿತ್ರವೊಂದನ್ನು ನೋಡುತ್ತಿದ್ದೆ. ರಾಜಕುಮಾರ್ ನಟಿಸಿರುವ 'ಭಕ್ತಪ್ರಹ್ಲಾದ'. ಅತಿ ಸಿನಿಮೀಯ ಘಟನೆಗಳನ್ನು ಬಿಟ್ಟರೆ ಸ್ವಾದನೀಯ ಸಿನೆಮಾ. ಯಕ್ಷಗಾನ ಪ್ರದರ್ಶನಗಳನ್ನು ಕಂಡು ಸಂತೋಷಿಸುತ್ತಿರುವ ನನಗೆ ಈ ಸ್ವಾರಸ್ಯಕರ ಸನ್ನಿವೇಶಗಳನ್ನು ಆಸ್ವಾದಿಸುವುದು ಹೊಸತಲ್ಲ. ಈಗಿನ ಡಿಶುಂ ಡಿಶುಂ ಚಿತ್ರಗಳು ಅನೇಕ ಸಂದರ್ಭಗಳಲ್ಲಿ ಮನೋರಂಜನೆ ಎಂದೆನಿಸಿದರೂ ಹಲವು ಬಾರಿ ಪೊಳ್ಳು ಎಂದನಿಸದೆ ಇರದು. ಉತ್ತಮ ಚಿತ್ರಗಳು ಇಲ್ಲವೆಂದಲ್ಲ.

ತನ್ನ ಮಾತನ್ನು ಮಗ ಉಲ್ಲಂಘಿಸಿ ತನ್ನ ವೈರಿ ವಿಷ್ಣುವನ್ನು ಪೂಜಿಸ ತೊಡಗಿದಾಗ ವ್ಯಘ್ರನಾದ ಹಿರಣ್ಯಕಶಿಪು ಮಗನೆಂಬ ಮಮಕಾರ ತೊರೆದು ಪ್ರಹ್ಲಾದನನ್ನು ಕೊಲ್ಲಲು ಆಜ್ಞಾಪಿಸುವ ಸನ್ನಿವೇಶ, ಆನೆಗಳಿಂದ ಮೆಟ್ಟಿ ಸಾಯಿಸಲು ಪ್ರಯತ್ನಿಸಿದಾಗ ಆನೆ ಸೊಂಡಿಲಿನಿಂದ ಹೂಮಾಲೆ ಹಾಕುತ್ತದೆ. ವಿಷ ಅಮೃತವಾಗುತ್ತದೆ, ಬೆಟ್ಟದಿಂದ ಪ್ರಪಾತಕ್ಕೆ ತಳ್ಳಿದಾಗ ಕಾಣದ ಕೈಗಳು ಅವನನ್ನು ಹಿಡಿದು ಕಾಪಾಡುತ್ತದೆ.

'ಡ್ಯಾಡ್, ಬರುವ ಭಾನುವಾರ ಡಬಲ್‌ರೋಡಲ್ಲಿ ಡಾಗ್ ಅಡಾಪ್ಷನ್ ಕಾರ್ಯಕ್ರಮ (ನಾಯಿ ದತ್ತು ಕಾರ್ಯಕ್ರಮ) ಇಟ್ಟುಕೊಂಡಿದ್ದೇವೆ. ನಿಮ್ಮ ನಾಯಿಮರಿಗಳನ್ನು ತಕ್ಕೊಂಡು ಬನ್ನಿ. ಸಂಕೀರ್ಣ ಬರ್ತಿದ್ದಾಳೆ. ಅವಳ ಜತೆ ಬನ್ನಿ' ಎಂದು ನನ್ನ ದೊಡ್ಡ ಮಗಳು ಸನ್ನಿಧಿ ಫೋನ್ ಮಾಡಿದ್ದಳು. ನನ್ನೀರ್ವ ಹೆಣ್ಣು ಮಕ್ಕಳು ಮದುವೆಯಾಗಿ ಬೇರೆ ಮನೆ ಹೂಡಿದ್ದಾರೆ.

'ಆಗ್ಲಿ ಮಗಳೇ, ಯಾವ ಜಾಗ ಅಂತ ಹೇಳು' ನಾನಂದಾಗ

'ಹಳೇ ಕಾಳಪ್ಪ ನರ್ಸಿಂಗ್ ಹೋಂ ಇದ್ಯಲ್ಲ, ಅದರ ಆಪೋಸಿಟ್'

'ಎಷ್ಟು ಗಂಟೆಗೆ?'

'ಹತ್ತು ಗಂಟೆಗೆ ಬಂದ್ರೆ ಸಾಕು'

'ಸಂಕೀರ್ಣಗೆ ಪೋನ್ ಮಾಡ್ತೇನೆ'

'ಗುಡ್ ನೈಟ್ ಡ್ಯಾಡ್'

'ಗುಡ್ ನೈಟ್'

ಈ ನಡುವೆ ಪ್ರತಿ ಭಾನುವಾರ ಬೆಳಗ್ಗೆ ಹತ್ತರಿಂದ ಹನ್ನೆರಡರವರೆಗೆ ನಾವು ಮೂವರೂ ನಮ್ಮ ನಮ್ಮ ನಾಯಿಗಳನ್ನು ಕಬ್ಬನ್ ಪಾರ್ಕ್‌ನ ಒಂದು ನಿರ್ದಿಷ್ಟ ಸ್ಥಳದಲ್ಲಿ ಸೇರಿ ಅವುಗಳನ್ನು ಆಟ ಆಡಿಸಿ ಜೊತೆಯಲ್ಲಿ ಬಂದ ಇನ್ನೂ ಹಲವಾರು ಶ್ವಾನಪ್ರಿಯರೊಂದಿಗೆ ಸಮಯ ಕಳೆಯುವುದುಂಟು. ಬಳಿಕ ಮಕ್ಕಳೂ ಅಳಿಯಂದಿರೊಂದಿಗೆ ಸಮಯ ಕಳೆಯುವುದುಂಟು. ಬಳಿಕ ಮಕ್ಕಳೂ ಅಳಿಯಂದಿರೊಂದಿಗೆ ಏರ್‌ಲೈನ್ಸ್ ಹೊಟೇಲಿನಲ್ಲಿ ತಿಂಡಿ ತಿಂದು ನಮ್ಮ ನಮ್ಮ

ಮನೆಗಳಿಗೆ ಹೋಗುವುದು ಪದ್ಧತಿ. ಹೀಗಾಗಿ ವಾರಕ್ಕೊಮ್ಮೆಯಾದರೂ ಭೇಟಿಯಾಗಿ ಪರಸ್ಪರ ಸಂಬಂಧ ವೃದ್ಧಿಸಲು ಅನುಕೂಲವಾಗಿದೆ.

ಮರುದಿನ ನನ್ನ ಚಿಕ್ಕ ಮಗಳು ಅಳಿಯ ಅವರ ಕಾರಿನಲ್ಲಿ ಹೊರಟರೆ ನಾನು ನನ್ನ ಕಾರಿನಲ್ಲಿ ಹೊರಟು ಆರ್.ಟಿ. ನಗರ ಟ್ರಾಫಿಕ್ ಪೋಲೀಸ್ ಸ್ಟೇಷನಿನ ಮುಂದೆ ಭೇಟಿಯಾಗಿ ನಾನು ಅವರನ್ನು ಹಿಂಬಾಲಿಸುತ್ತಾ ಮಧ್ಯದಲ್ಲಿ ಒಮ್ಮೆ ದಾರಿ ತಪ್ಪಿ ಅಂತೂ ಆ ಸ್ಥಳ ಕಂಡು ಹಿಡಿಯುವಾಗ ಗಂಟೆ ಹತ್ತೂವರೆಯಾಗಿತ್ತು. ಹಲವಾರು ಜನ ಬಂದಿದ್ದರು. ಬರುತ್ತಲೇ ಇದ್ದರೂ. ನೋಂದಣಿಗಾಗಿ ರೂ. 200 ಸಂಗ್ರಹಿಸುತ್ತಿದ್ದರು. ನನ್ನ ಮಗಳೇ ಈ ಕಾರ್ಯಕ್ರಮ ನಡೆಸಿ ಕೊಡುತ್ತಿದ್ದುದರಿಂದ ರೂ. 5000 ನಾನಿತ್ತೆ. ಟಿವಿಯವರು ಬಂದು ನನ್ನ ಮಗಳ ಹೇಳಿಕೆಯನ್ನು ಇಂಗ್ಲೀಷ್‌ನಲ್ಲೂ ನನ್ನ ಮಾತುಗಳನ್ನು ಕನ್ನಡದಲ್ಲೂ ಧ್ವನೀಕರಿಸಿಕೊಂಡು ಹೋದರು. ಬಳಿಕ ಪ್ರಸಾರವಾಗಿತ್ತೋ ಇಲ್ಲವೋ ತಿಳಿಯದು.

ಅಲ್ಲೇ ಇದ್ದ ಚಿಕ್ಕ ಕ್ಯಾಂಟೀನಿನಲ್ಲಿ ತಿಂಡಿ ತಿಂದ ಬಳಿಕ ಸುಮಾರು ಹನ್ನೆರಡುವರೆಗೆ ಕುಳಿತು ಕುಳಿತು ಸಾಕಾದ ನಾನು ಮಕ್ಕಳೊಡನೆ ಹೇಳಿ ನನ್ನ ನಾಯಿ ಮರಿಗಳೊಂದಿಗೆ ಅಲ್ಲಿಂದ ಹೊರಟೆ. ಆ ಹೊತ್ತಿಗೆ ಬಿಸಿಲಿನಲ್ಲಿ ನಿಂತಿದ್ದ ಕಾರು ಕುದಿಯ ತೊಡಗಿತ್ತು. ಆ ಬೇಗೆಗೆ ನಾಯಿಮರಿಗಳು ಸತ್ತಾವೆಂದು ಹಿಂದಿನ ಕಿಟಕಿಯ ಗಾಜನ್ನು ಅರ್ಧವೋ ಮುಕ್ಕಾಲೋ ಇಳಿಸಿ ಅವರೆಲ್ಲರಿಗೂ 'ಬೈ' ಹೇಳಿ ಫ್ಲೈ ಓವರ್ ಕಡೆಗೆ ಹೊರಟೆ.

ಫ್ಲೈ ಓವರ್‌ನ ನಡುವೆ ಬರುವಷ್ಟರಲ್ಲಿ ಹಿಂಬದಿಯಿಂದ ಏನೋ ಸದ್ದಾದ ಹಾಗಾಯಿತು. ಮರಿಗಳು ಸೀಟಿನ ಮೇಲೆ ಓಡಾಡುತ್ತಿರಬಹುದೆಂದು ಭಾವಿಸಿ ಸುಮ್ಮನಾದೆ. ತುಸು ದೂರ ಹೋಗುತ್ತಲೇ ಮುಂದಿನಿಂದ ಬರುತ್ತಿರುವ ವ್ಯಕ್ತಿ ನನ್ನೆಡೆಗೆ ಕೈ ತೋರಿಸಿ ಬೈದುಕೊಂಡು ಹೋದ. ನನಗರ್ಥವಾಗಲಿಲ್ಲ. ಇನ್ನಷ್ಟು ದೂರ ಹೋದ ಬಳಿಕ ಯಾಕೋ ಹಿಂತಿರುಗಿ ನೋಡಿದರೆ, ಮೂರು ತಿಂಗಳ ಬಾಕ್ಸರ್ ಮರಿ 'ಪೂಮಾ' ಇಲ್ಲ. ಒಂಬತ್ತು ತಿಂಗಳ ಡಾಲ್ಮೇಶನ್ ಮರಿ 'ಬಟನ್ಸ್' ಮಾತ್ರ ಇದೆ. ಈ ಹೆಸರು ನನ್ನ ಮಕ್ಕಳೇ ಇಟ್ಟದ್ದು. ಎದೆ ಧಸಕ್ ಎಂದಿತು. ಕಾರು ಅಲ್ಲಿಯೇ ನಿಲ್ಲಿಸುವ ಹಾಗಿಲ್ಲ. ಹಿಂದಿನಿಂದ ವಾಹನಗಳ ಸಾಲು. ನಿಧಾನವಾಗಿ ಎಡಕ್ಕೆ ಸರಿದು ಸರಿದು ಸೈಂಟ್ ಮಾರ್ಕ್ಸ್ ರಸ್ತೆ ತಿರುಗುವ ಸ್ವಲ್ಪ ಮೊದಲು ಗಾಡಿಯನ್ನು ಬದಿಯಲ್ಲಿ ನಿಲ್ಲಿಸಿದೆ. ಏನು ಮಾಡಬೇಕೆಂದು ತೋಚುತ್ತಿಲ್ಲ. ತಕ್ಷಣ ಮಗಳಿಗೆ ಫೋನು ಮಾಡಿ,

'ಮಗಾ 'ಪೂಮಾ' ಎಲ್ಲೋ ಕಾರಿಂದ ಬಿದ್ದು ಹೋದ'
'ರಿಲಾಕ್ಸ್ ಡ್ಯಾಡ್, ನಾವ್ಯಾರಾದ್ರೂ ಬರ್ತೀವಿ. ನೀವು ಅಲ್ಲೇ ಇರಿ.'
ನಾನಂದುಕೊಂಡೆ, ಋಣಾನುಬಂಧ ಇದ್ದಲ್ಲಿ ಸಿಗುತ್ತೆ
ಆದರೂ ನಾನು ಹುಡುಕಲೇ ಬೇಕಲ್ಲ.

ಕಾರಲ್ಲಿರುವ 'ಬಟನ್ಸ್' ಏನು ಮಾಡುವುದು. ಅದನ್ನೆಳೆದುಕೊಂಡು ಹುಡುಕಲು

ತೆರಳುವುದು ಅಸಾಧ್ಯ. ಕಾರಲ್ಲಿ ಬಿಟ್ಟು ಗಾಜು ಮುಚ್ಚಿದರೆ ಹಿಂತಿರುಗಿ ಬರುವಷ್ಟರಲ್ಲಿ ಅದು ಉಸಿರುಗಟ್ಟಿ ಸತ್ತೀತು. ಗಾಜು ತೆರೆದಿಟ್ಟಲ್ಲಿ ಕಳ್ಳರನ್ನು ಆಹ್ವಾನಿಸಿದಂತೆ. ಅಲ್ಲದೆ ಇದೂ ಹೊರಗೆ ಹಾಕಿ ಹೋದಲ್ಲಿ! ಹೇಗೂ ಆಗಲಿ ಎಂದು ಗಾಳಿ ಬರುವಷ್ಟು ಮಾತ್ರ ಗಾಜು ಇಳಿಸಿ ಕಾರಿಗೆ ಬೀಗ ಹಾಕಿ ಹಿಂದೆ ಫ್ಲೈ ಓವರ್‌ನತ್ತ ಹೊರಟೆ.

ಎಲ್ಲೆಂದು ಹುಡುಕಲಿ! ಎಲ್ಲಿ ಬಿದ್ದಿರಬಹುದು ಅದು! ನಡೆಯುತ್ತಾ ನಡೆಯುತ್ತಾ ಫ್ಲೈ ಓವರ್‌ನ ಮೇಲೆ ಬರುವಷ್ಟರಲ್ಲಿ ನನ್ನ ಅಳಿಯ ಜೀವನ್ ಅಲ್ಲಿ ಬಂದು ಸೇರಿದ. ಏನಾಯ್ತು ಹೇಗಾಯ್ತು ಎಂದು ವಿಚಾರಿಸುವಷ್ಟರಲ್ಲಿ ನಾಲ್ಕು ಸುತ್ತು ಕಣ್ಣಾಡಿಸುತ್ತಿರುವ ನಮಗೆ ಕೆಳಗೆ ಅನತಿ ದೂರದಲ್ಲಿ ಓರ್ವ ಸೈಕಲ್ ಸವಾರ ನಡೆದುಕೊಂಡು 'ಪೂಮಾ'ನ ಕತ್ತಿಗೊಂದು ದಾರ ಕಟ್ಟಿ ಕರೆತರುವುದು ಕಂಡು ಬಂತು. ಬದುಕಿದೆಯಾ ಬಡ ಜೀವವೇ ಎಂದಂದುಕೊಂಡೆ. ಜೀವನ್ ತಕ್ಷಣ ಅಲ್ಲಿಂದ ಕೆಳಗೆ ಓಡಿ ಹೋಗಿ ಅವನೊಡನೆ ಮಾತನಾಡಿ ಕೈಗೆ ಒಂದಿನ್ನೂರು ಕೊಟ್ಟು ಮರಿಯನ್ನು ತರುವಷ್ಟರಲ್ಲಿ ನಾನೂ ನಡೆದುಕೊಂಡು ಆ ಸ್ಥಳ ಸೇರುವುದಕ್ಕೂ ಸರಿಹೋಯಿತು. ಬಳಿಕ ಕಾರಿನ ಬಳಿ ಬರುವಷ್ಟರಲ್ಲಿ 'ಬಟನ್' ಕೂಡಾ ಸರಿಯಾಗಿಯೇ ಇದ್ದ. 'ಪೂಮ'ನ ಮೈಮೇಲೆ ಒಂದೆರಡು ತರಚು ಗಾಯಗಳಾಗಿದ್ದವಷ್ಟಲ್ಲದೆ ಬೇರೇನೂ ಆಗಿದ್ದಂತಿರಲಿಲ್ಲ.

'ರಿಲ್ಯಾಕ್ಸ್, ಟೇಕ್ ಕೇರ್ ಅಂಕಲ್', ಎಂದ ಜೀವನ್

'ಥ್ಯಾಂಕ್ಸ್ ಜೀವನ್', ಎಂದಂದು ಡ್ರೈವ್ ಮಾಡಿಕೊಂಡು ಮನೆ ಸೇರಿದೆ.

ದಾರಿಯಲ್ಲಿ ನಡೆದ ಘಟನೆಯ ಮೆಲುಕು ಹಾಕುವುದು ಬೇಡ ಎಂದಂದುಕೊಂಡು ಬಲವಂತವಾಗಿ ಹಾಡು ಕೇಳುತ್ತಾ ಬಂದೆ. ಮನೆಗೆ ಬಂದು ಊಟ ಮಾಡಿ ಮಲಗಿದೊಡನೆ ಯೋಚನೆಗಳ ಪೂರವೇ ಬರತೊಡಗಿತು.

ಕಾರಿನಿಂದ ಹೊರ ಜಿಗಿದೊಡನೆ ಹಿಂಬದಿಯಲ್ಲಿ ಬರುತ್ತಿರುವ ವಾಹನಗಳಿಗೆ ಸಿಲುಕಿ ಸಾಯದೇ ಹೇಗೆ ಉಳಿದ!

ಫ್ಲೈ ಓವರ್‌ನಿಂದ ಏನಿಲ್ಲವೆಂದರೂ ಇಪ್ಪತ್ತು ಅಡಿಗಳಷ್ಟು ಕೆಳಗೆ ಜಿಗಿದಾಗ ಏನೂ ಆಗದೆ ಹೇಗೆ ಬದುಕಿದ!

ಕೆಳಗಿನ ರಸ್ತೆಗೆ ಬಿದ್ದಾಗ ಅಲ್ಲಿ ನಿರಂತರವಾಗಿ ಚಲಿಸುತ್ತಿರುವ ವಾಹನಗಳಿಂದ ಹೇಗೆ ಪ್ರಾಣ ಉಳಿಸಿಕೊಂಡ!

ಸೈಕಲ್ ಸವಾರನ ಕೈಗೆ ಸಿಲುಕ ಬೇಕಾದಲ್ಲಿ ಹೇಗೆ ಅದೇ ದಿಕ್ಕಿನಲ್ಲಿ ಹೋಗತೊಡಗಿದ! ಇನ್ನ್ಯಾರದೋ ಕೈಗೆ ಸಿಲುಕಿ ಅವನನ್ನು ಕೊಂಡೊಯ್ದಿದ್ದಲ್ಲಿ!

ಹೋಗಲಿ, ಆ ಸೈಕಲ್ ಸವಾರ ಸಮಯಕ್ಕೆ ಸರಿಯಾಗಿ ಅದೇ ದಿಕ್ಕಿನಲ್ಲಿ ಬರಬೇಕಲ್ಲಾ! ಬಂದರೂ ಒಪ್ಪಿಕೊಂಡು ಮರಿಯನ್ನು ಹಿಂತಿರುಗಿಸಬೇಕಲ್ಲಾ!

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।

ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥

(ನಾನು ಸಮಸ್ತ ಜಗತ್ತಿನ ಒಡೆಯ ಮತ್ತು ಎಲ್ಲವೂ ನನ್ನಿಂದಲೆ ನಡೆಯುವುದು. ಇದನ್ನು ತಿಳಿದು ಜ್ಞಾನಿಗಳಾದವರು ನನ್ನನ್ನು ಭಕ್ತಿಯಿಂದ ಪೂಜಿಸುತ್ತಾರೆ.)

'ಸಾರ್ ಸಿಕ್ಕಾಪಟ್ಟೆ ಜ್ವರ ಕೀಲು ನೋವು ಹಿಡ್ಕೊಂಡೈತೆ. ತಲೆ ಸುತ್ತಾ ತಿರುಗ್ತಾ ಐತೆ ಇದೆ. ಎದ್ದೇಳಕ್ಕೆ ಆಯ್ತಾ ಇಲ್ಲ.'

ಪರೀಕ್ಷೆ ಮಾಡಿದ ನಾನು. 'ಇದು ಈಗಿನ ವೈರಸ್‌ಜ್ವರ. ಸ್ವಲ್ಪ ದಿನ ಕಾಡುತ್ತೆ.'

'ಸಾರ್ ಗ್ಲೂಕೋಸ್ ಹಾಕಿ ಸಾರ್'. 82 ವರ್ಷದ ತಿಮ್ಮಪ್ಪ ಹೇಳಿದಾಗ ಸರಿ ಎಂದೆಂದು ಕೊಂಡ ನಾನು ಬೆಡ್ ಮೇಲೆ ಮಲಗಿಸಿ ಸಲೈನ್ ಹಾಕಿಸುತ್ತೇನೆ. ಸಂಜೆ ಅವನ ಮಗ ಹರೀಶನೂ ಸೊಸೆ ಗಿರಿಜಳೂ ಅದೇ ತೊಂದರೆಯಿಂದ ಬರುತ್ತಾರೆ. ಅವರಿಗೂ ಫ್ಲೂಯಿಡ್ಸ್ ಹಾಕಿಸುತ್ತೇನೆ. ಮರುದಿನ ಅವನ ಮಡದಿ ಗಂಗಮ್ಮಳೂ ಬರುತ್ತಾಳೆ. ಅವಳಿಗೂ ಅದೇ ಟ್ರೀಟ್‌ಮೆಂಟ್. ಮರುದಿನದಷ್ಟರಲ್ಲಿ ಎಲ್ಲರೂ ಸುಧಾರಿಸಿ ಕೊಂಡಿರುತ್ತಾರೆ. ಒಂದೆರಡು ದಿನಗಳಲ್ಲಿ ಎಲ್ಲರೂ ಗುಣಮುಖರಾಗುತ್ತಾರೆ. ಆದರೆ ತಿಮ್ಮಪ್ಪ ತುಸುಮಟ್ಟಿಗೆ ಗಂಗಮ್ಮ ನೋವು ಅನುಭವಿಸಿರುತ್ತಾರೆ. ಆ ದಿನವೂ 'ಗ್ಲೂಕೋಸ್' ಹಾಕಿ ಎಂದು ಅವರು ಅಂಗಲಾಚಿಕೊಂಡಾಗ ಪಕ್ಕ ಪಕ್ಕದ ಮಂಚದಲ್ಲಿ ಎದುರು ಬದುರಾಗಿ ಅವರನ್ನು ಮಲಗಿಸಿ ಫ್ಲೂಯಿಡ್ಸ್ ಹಾಕಿಸುತ್ತೇನೆ. ಎಲ್ಲವೂ ಸುಸೂತ್ರವಾಗಿ ಹೋಗುತ್ತಿದೆ ಇನ್ನೇನು ಒಂದು ಹತ್ತು ನಿಮಿಷಗಳಲ್ಲಿ ಅವರನ್ನು ಮನೆಗೆ ಕಳುಹಿಸುವವನಿದ್ದೇನೆ ಎನ್ನುವಷ್ಟರಲ್ಲಿ ತಿಮ್ಮಪ್ಪ ಎದೆ ನೋವು ಸುಸ್ತು ಸಂಕಟ ಎಂದು ಬೆವರುತ್ತಾ ಚಡಪಡಿಸಿ ತೊಡಗಿದಾಗ ನಮಗೆಲ್ಲಾ ಗಾಬರಿ. ತಕ್ಷಣ ಗ್ಲೂಕೋಸ್ ನಿಲ್ಲಿಸಿ ಅವರಿಗೆ ಆಕ್ಸಿಜನ್ ಕೊಡತ್ತೇನೆ. ಒಂದರ್ಧ ಗಂಟೆಯಲ್ಲಿ ತುಸು ಚೇತರಿಸಿಕೊಂಡಾಗ ನಮಗೆಲ್ಲಾ ನಿಟ್ಟುಸಿರು ಬಿಡುವಂತಾಯ್ತು. ಪಕ್ಕದಲ್ಲಿ ಮಲಗಿದ್ದ ಗೌರಮ್ಮ ಇದನ್ನು ಮೌನವಾಗಿ ನೋಡುತ್ತಿದ್ದವಳೂ ಸಮಾಧಾನ ಪಟ್ಟಿರಬೇಕು.

'ನೋಡಪ್ಪಾ ಹರೀಶ್. ಎಲ್ಲಾ ಸರಿಯಾಗಿದೆ ಆದರೂ ಒಂದು ಈಸಿಜಿ ತಕ್ಕೊಂಡು ಬಾಪ್ಪಾ'

'ಯಾಕ್ಸಾರ್ ಎಲ್ಲಾ ಚೆನ್ನಾಗಿದೆಯಲ್ಲಾ'

'ಆದ್ರೂ ಇರ್ಲಿ ನಮ್ಮೆಲ್ಲರ ಸಮಾಧಾನಕ್ಕೆ'

ಒಲ್ಲದ ಮನಸ್ಸಿನಿಂದ, 'ಸರಿ ಸಾರ್' ಅಂದ

ಆವಲೇ ಗಂಟೆ ಒಂಬತ್ತು. ಲ್ಯಾಬ್‌ಗೆ ಹೋಗಿ ಈಸಿಜಿ ತೆಗೆಯುವಷ್ಟರಲ್ಲಿ ಅಲ್ಲಿದ್ದ ಕನ್ಸಲ್ಟಿಂಗ್ ಡಾಕ್ಟರು ಹೋಗಿಯಾಗಿತ್ತು. ಆದರೂ ಈಸಿಜಿ ನಾರ್ಮಲ್ ಇಗಿತ್ತು ಎಂಬ ಸಮಾಧಾನ.

'ನಾರ್ಮಲ್ ಆಗಿ ಬಂದಿದೆಯಲ್ಲಾ ಸಾರ್.' ಬೇಡ ಅಂತ ನಾನು ಹೇಳಿಲ್ವಾ ಅಂದಾಗ

'ನಿನಗೆ ಅದೆಲ್ಲಾ ತಿಳಿಯಲ್ಲಾ.' ಈಗ ಸಮಾಧಾನವಾಗಿ ಮನೆಗೆ ಹೋಗು

ಸುಮಾರು ಹತ್ತೂವರೆ ಗಂಟೆಗೆ ಹೊರಗೆ ಏನೋ ಜೋರು ಜೋರಾಗಿ ಮಾತನಾಡುವುದು ಕೇಳಿ ಬಂದಾಗ ನನಗೂ ಆತಂಕ. ಹೊರಗೆ ಕಾರಿನಲ್ಲಿ ತಿಮ್ಮಪ್ಪನನ್ನು ಮಲಗಿಸಿ ನಾನು ಬಂದು ನೋಡಬೇಕೆಂದು ಕರೆಯುತ್ತಿದ್ದಾರೆ. ಕಾರಿನ ಬಳಿ ಸಾರಿ ನಾನು ತಿಮ್ಮಪ್ಪನ ಎದೆಯ ಮೇಲೆ ಸ್ಟೆತಸ್ಕೋಪ್ ಇಟ್ಟಾಗ ನನಗೆ ಯಾಕೋ ಸಂಶಯ.

'ಒಂದು ಕ್ಷಣವೂ ತಡಮಾಡದೆ ತಕ್ಷಣ ಆಸ್ಪತ್ರೆಗೆ ಕರ್ಕೊಂಡು ಹೋಗಿ' ನಾನು ಹೇಳಿದಾಗ 'ಯಾಕೆ ಸಾರ್?'

'ಅದೆಲ್ಲಾ ಕೇಳ್ಬೇಡಿ, ಈಗ್ಲೇ ಹೊರಡಿ. ಗಾಡಿ ಹೊರಡುತ್ತದೆ. ಮರುದಿನ ಭಾನುವಾರ ನನ್ನ ಕ್ಲಿನಿಕ್‌ಗೆ ರಜಾ. ಆದರೆ ಒಂದು ಸುದ್ದಿ ತಿಮ್ಮಪ್ಪ ಹೋಗಿಯಾಯ್ತು.

ಅನನ್ಯಾಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

(ನನ್ನನ್ನೇ ಅನನ್ಯವಾಗಿ ಜ್ಞಾನಿಸುತ್ತ ಯಾರು ಪರಿಶುದ್ಧವಾದ ಪೂರ್ಣ ಭಕ್ತಿಯಿಂದ ನನ್ನನ್ನು ಉಪಾಸನೆ ಮಾಡುವರೋ, ಅವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುವೆನು.)

# ಅಡಿಗರ "ಏನಾದರೂ ಮಾಡುತಿರು ತಮ್ಮ"

(ಫೆಬ್ರವರಿ 18 ಅಡಿಗರ ಜನ್ಮದಿನ. ಅವರ ನೆನಪಿಗಾಗಿ ಈ ಬರಹ)

– ಬಿ.ವಿ. ಕೆದಿಲಾಯ

'ಏನಾದರೂ ಮಾಡುತಿರು ತಮ್ಮ'. ಗೋಪಾಲಕೃಷ್ಣ ಅಡಿಗರ ಒಂದು ಪ್ರಸಿದ್ಧ ಕವನ. ಅಡಿಗರ ಇತರ ಅನೇಕ ಕವನಗಳಂತೆ ಇದರ ಶೀರ್ಷಿಕೆಯನ್ನು ಅಥವಾ ಮೊದಲ ಸಾಲನ್ನು ಓದಿದಾಗ 'ಮನುಷ್ಯ ನಿಷ್ಕ್ರಿಯನಾಗಕೂಡದು, ಕ್ರಿಯಾಶೀಲನಾಗಬೇಕು' ಎಂಬ ವಾಚ್ಯಾರ್ಥ ಮೇಲುನೋಟಕ್ಕೆ ಕಂಡುಬಂದರೂ, ಮುಂದೆ ಮುಂದೆ ಓದುತ್ತಾ ಹೋದಂತೆ ಕವನದ ಅರ್ಥ, ಧ್ವನಿ ಅದಲ್ಲ ಎನ್ನುವುದು ಗೋಚರಿಸುತ್ತದೆ. ಸುಂದರವಾಗಿ ವ್ಯವಸ್ಥಿತವಾಗಿ, ಸಹಜವಾಗಿ ಇದ್ದುದನ್ನು ಹಾಳುಮಾಡುವ, ನಿಸರ್ಗವನ್ನೂ, ಪ್ರಾಣಿ, ಪಕ್ಷಿ, ಸಸ್ಯಗಳನ್ನು ನಾಶಗೊಳಿಸುವ ಹಾಗೂ ಅನವಶ್ಯಕವಾಗಿ ಹಿಂಸಿಸಿ ಆನಂದಿಸುವ ಮನುಷ್ಯನ ವಿಧ್ವಂಸಕ ಪ್ರವೃತ್ತಿಯನ್ನು ತೀಕ್ಷ್ಣ ವ್ಯಂಗ್ಯದಿಂದ ಇರಿಯುವ ಈ ಕವನ ಒಂದು ಉತ್ತಮ ಪರಿಸರಪರ ಕವನವೂ ಹೌದು. ಇಲ್ಲಿ ಕವಿ 'ಮಾಡು' ಎಂಬ ಕ್ರಿಯಾಪದವನ್ನು 'ಮಾಡಬೇಡ' ಎಂಬ ನಿಷೇಧಾರ್ಥದಲ್ಲಿ ವ್ಯಂಗ್ಯವಾಗಿ ಬಳಸಿದ್ದಾರೆ ಎಂಬುದು ಅರ್ಥವಾಗದಿದ್ದರೆ ಇಡೀ ಕವನವೇ ಅಪಾರ್ಥಕ್ಕೊಳಗಾಗುವ ಅಪಾಯವಿದೆ. ಮನುಷ್ಯನ ವಿನಾಶಕ ಶಕ್ತಿ ಮುಗ್ಧ ಜೀವಿಗಳನ್ನು ಹಿಂಸಿಸಿ ನಾಶಪಡಿಸುವ ಪರಿಯನ್ನು ಕವನ ಆರಂಭದಲ್ಲಿಯೇ ಉಜ್ವಲ ಚಿತ್ರಕಶಕ್ತಿಯಿಂದ ಕವನ ಬಣ್ಣಿಸುತ್ತದೆ.

**ಏನಾದರೂ ಮಾಡುತಿರು ತಮ್ಮ, ಸುಮ್ಮನಿರಬ್ಯಾಡ**
**ಆ ಸಸಿಯ ಕೀಳು ಚಿವುಟು ಈ ಚಿಗುರ**
**ಮರಿಚಿಟ್ಟೆ, ಗಿಳಿ, ಗುಬ್ಬಿ ಎಲ್ಲಿ ಸಿಕ್ಕರೆ ಅಲ್ಲಿ**
**ಅಟ್ಟು, ಹಿಡಿ, ಕುಟ್ಟು ಕಿತ್ತೆಸೆ ಪಕ್ಕ ಪುಕ್ಕಗಳ.**

ಹೀಗೆ ಹಿಂಸಿಸುತ್ತಾ, ಕೊಲ್ಲುತ್ತಾ, ನಾಶಗೈಯುತ್ತಾ ಸಾಗುವ ವಿಧ್ವಂಸಕ ಮನುಷ್ಯನ ಚಟುವಟಿಕೆಯನ್ನು ಕವಿ ವಿಡಂಬಿಸು ಪರಿ ನೋಡಿ.

**ನಿನ್ನ ನಾಲ್ಕೂ ಕಾಲ ನರ್ತನಕೆ ಪ್ರತಿನಿಮಿಷ**
**ಏನಾದರೊಂದಕ್ಕೆ ಜಖಂ ಆಗದಿರೆ ನಿನ್ನ**
**ಅದ್ಭುತ ಪ್ರತಿಭೆಗೆ ಕುಂದುಕಡೆಯ ತಮ್ಮ.**

ತುಂಬ ಧ್ವನಿ ಶ್ರೀಮಂತವಾದ ಈ ಸಾಲುಗಳು ನಮ್ಮ ರಾಜಕಾರಣಿಗಳಿಗೂ (ಬಹುಶಃ ಕೆಲವು ಬುದ್ಧಿಜೀವಿಗಳಿಗೂ) ಅನ್ವಯಿಸುತ್ತದೆ. ತುಂಟಾಟದಲ್ಲಿ ತೊಡಗಿರುವ ಚಿಕ್ಕ ಮಗುವಿನಿಂದ ಹಿಡಿದು ದೇಶದ ರಾಜಕೀಯದಲ್ಲಿ ವಿಧ್ವಂಸಕ ಚಟುವಟಿಕೆಗಳನ್ನು ನಡೆಸುವ

ದುಷ್ಟ ರಾಜಕಾರಣಿಗಳವರೆಗೂ ಈ ಮಾತಿನ ಧ್ವನಿ ವ್ಯಾಪಿಸುತ್ತದೆ. ದೇಶ ಕಾಲಗಳನ್ನು ಮೀರಿ ಮೆರೆಯುತ್ತದೆ.

**ಕವನ ಮುಂದೆ ಹೇಳುತ್ತದೆ :** ಈ ವಿಧ್ವಂಸಕ ಚಟುವಟಿಕೆಗಳಿಂದ ಜಗತ್ತು ಕಾಡಾನೆ ಹೊಕ್ಕ ನಂದನದಂತೆ ಅಸ್ತವ್ಯಸ್ತವಾಗಿದೆ. ಮನುಷ್ಯ ತನ್ನ ಪೌರುಷದ ಹತ್ತಿಪ್ಪತ್ತು ಸ್ವಿಚ್ಚುಗಳನ್ನು ಒಂದೇ ಸಾರಿ ಒತ್ತಿದ್ದಾನೆ. ಏಕೆಂದರೆ ಅವನಿಗೆ ಯೋಚಿಸುವ, ತೂಗುವ, ಅಳೆಯುವ, ವಿವೇಚಿಸುವ ವ್ಯವಧಾನವಿಲ್ಲ, ವಿವೇಕವಿಲ್ಲ. ಅವೆಲ್ಲ ಅವನ ದೃಷ್ಟಿಯಲ್ಲಿ 'ಗತಕಾಲದಾಪತ್ತು. ಸತ್ತ ಭಾವದ, ಸಾಯಲಾರದ ಪ್ರೇತಸಂಪತ್ತು'.

ಮುಂದಿನ ಸಾಲುಗಳಲ್ಲೂ ವಿಧ್ವಂಸಕ ಪ್ರವೃತ್ತಿಯ ಅಟ್ಟಹಾಸದ ವರ್ಣನೆ ಉಜ್ವಲ ಪ್ರತಿಮೆಗಳಲ್ಲಿ ವ್ಯಕ್ತವಾಗುತ್ತದೆ.

**ಕಾಡು ಇದೆ, ಕಡಿ ಸಿಗಿದು ತೋರಣಕಟ್ಟು**
**ಕೈಲಿ ಕೊಡಲಿ ಇದೆ, ಗರಗಸ, ಮಚ್ಚು, ಕತ್ತಿ,**
**ಎತ್ತೆತ್ತಿ ಅಡಿಸಾಡಿಸು.**

ಗುರಿ ಅಸ್ಪಷ್ಟವಾಗಿದ್ದಾಗ, ಕವಲು ದಾರಿಯ ಮುಂದೆ ನಿಂತಾಗ, ಯೋಚಿಸಿ, ವಿವೇಚಿಸಿ ನಿರ್ಧರಿಸುವ ಬದಲು ಕಣ್ಣಪಟ್ಟಿ ಕಟ್ಟಿದ ಕುದುರೆಯಂತೆ ಮುನ್ನುಗ್ಗು, ಕಣ್ಣಿಗೇನೆ ಬಿದ್ದರೂ ಅದನ್ನು ಹಿಡಿದು ಹಿಂಡು, ಕಾಲಿಗೇನು ತೊಡರಿದರೂ ಅದನ್ನು ಕತ್ತರಿಸು – ಹೀಗೆ ನಿಷೇಧಾರ್ಥದ ವ್ಯಂಗ್ಯ ವಿಜೃಂಭಿಸುತ್ತಾ ಇದರ ಪರಿಣಾಮವಾಗಿ ಬಡ ಭೂಮಿತಾಯಿಯ ಗತಿ ಏನಾಗಿದೆ ಎನ್ನುವುದನ್ನು ಹೃದ್ರಾವಕವಾದ ಈ ಸಾಲುಗಳಲ್ಲಿ ಕಾಣುತ್ತೇವೆ.

**ಈ ಅಬಲೆ ತಾಯಿ ಪೃಥಿವಿ**
**ಸುಸ್ತಾಗಿ ಇಲ್ಲಿ ಮಲಗಿದ್ದಾಳೆ**
**ಮುಗಿಲ ಕಡೆ ಕಣ್ಣನೆಟ್ಟಿದ್ದಾಳೆ**
**ಅವಳ ಅಂಗಾಂಗದಲಿ ಒಂದಿಷ್ಟು**
**ರಕ್ತಜಿನುಗುವತನಕ**
**ಅದಕಚ್ಚಿ ಹೀರು**
**ಮಾಂಸವಿಲ್ಲವೆ? ಮಾಂಸ?**
**ಮೂಳೆ, ನರ, ಮಜ್ಜೆ ತೊಗಲಾದರೂ ಇಹುದೋ ಇಲ್ಲೊ?**
**ಅಹಹಾ! ನೀನೆ ಗಂಡುಕಣೋ!**

'ಪರಿಸರ' ನಾಶದ ಕ್ರೌರ್ಯವನ್ನೂ, ನಿಸರ್ಗ ಶೋಷಣೆಯ ಭೀಭತ್ಸವನ್ನೂ ಇಲ್ಲಿನ ಪ್ರತಿಮೆಗಳು ಅಭಿನಯಿಸಿ ಹೇಳುವ ರೀತಿ ಅನನ್ಯ. ಮುಂದಿನ ಸಾಲುಗಳಲ್ಲಿ ಬರುವ ಜೀವದ ಬಾವಿಗೆ ಯಾತ ಕಟ್ಟಿ ನೀರನ್ನು ಮೊಗೆವ, ಹನಿಬನಿ ಕೊನೆಸಿಗುವ ತನಕ ಪಾತಾಳಗರುಡಿ

ಛಳಿಛಳಿದು ತಳೆವ ತಪಕುವ ಪ್ರತಿಮೆಯೂ ನಿಸರ್ಗಲೋಪದಗೆಯ ಮತ್ತೊಂದು ಆಯಾಮವನ್ನು ತೆರೆದು ತೋರಿಸುತ್ತದೆ ಈ ಪ್ರಕ್ರಿಯೆ ಮುಂದುವರಿದು

**ಅಳುವನೊಡೆ ಮಹತ್ತನ್ನು ಪಡೆ**
**ಬ್ರಹ್ಮಾಂಡಕ್ಕೇ ತೊಟ್ಟು ಬಿಡುಬ್ರಹ್ಮಾಸ್ತ್ರ**
**ವಿಜಯೀ ಭವ**

ಎಂಬ ಸಾಲುಗಳಲ್ಲಿ ಪರಾಕಾಷ್ಠೆಯನ್ನು ತಲುಪುತ್ತದೆ. ಸುಮ್ಮನೇ ಕೂತು ಭೂಮಿಗೆ ಭಾರವಾಗುವ ಬದಲು ಭೂಭಾರ ಕಳೆಯುವ ಈ ಕೆಲಸ ನಿನಗೆ ಸೂಕ್ತ ಎಂಬರ್ಥದ ಕೊನೆಯ ಸಾಲು ಔಚಿತ್ಯಪೂರ್ಣ ಉಪಸಂಹಾರವಾಗುತ್ತದೆ.

ಅಡಿಗರು ಈ ಕವನವನ್ನು ಬರೆದದ್ದು 1953ರಲ್ಲಿ ಅಂದರೆ ಸುಮಾರು 62 ವರ್ಷಗಳ ಹಿಂದೆ ಆಗ ಪರಿಸರ ಪ್ರಜ್ಞೆ ಬೆಳೆದಿರಲಿಲ್ಲ. ಅರ್ಧ ಶತಮಾನ ಕಳೆದರೂ ಹೊಚ್ಚ ಹೊಸ ಕವನದಂತೆ ಸಮಕಾಲೀನ ಪ್ರಸ್ತುತತೆಯಿಂದ ಕಳಕಳಿಸುತ್ತಿರುವುದು ಅಡಿಗರ ಅಸಾಧಾರಣ ಪ್ರತಿಭೆಗೆ ಸಾಕ್ಷಿಯಾಗಿದೆ. ಇದು ಎಂದು ಹಳತಾಗದ ಅಜರಾಮರ ಕವನ.

# ಕನ್ನಡವ ಕಾಪಾಡಿ ಕನ್ನಡಿಗರಿಂದ

– ವಿವೇಕಪ್ರಿಯ

ಕನ್ನಡ ಸಾಯುತ್ತಿರುವ ಊರು ಬೆಂಗಳೂರು ಎಂದು ದಿ। ಯು.ಆರ್. ಅನಂತಮೂರ್ತಿಯವರು 2–3 ವರ್ಷಗಳ ಹಿಂದೆ ಒಂದು ಭಾಷಣದಲ್ಲಿ ಹೇಳಿದ್ದರು. ಈ ಮಾತು ಇಂದು ಕಣ್ಣು ಕುಕ್ಕುವ ಸತ್ಯವಾಗಿ ಕನ್ನಡ ನಿಷ್ಠ ಮನಸ್ಸುಗಳನ್ನು ಹಿಂಸಿಸುತ್ತಿದೆ. ಪತ್ರಿಕೆಗಳಲ್ಲಿ, ಟಿ.ವಿ. ಮುಂತಾದ ಮಾಧ್ಯಮಗಳಲ್ಲಿ ಮಾತ್ರವಲ್ಲ ಬೆಂಗಳೂರಿನ ಅತಿ ಸಾಮಾನ್ಯ ಮನುಷ್ಯರ ದಿನನಿತ್ಯದ ಭಾಷೆಯೂ ಬಹುಮಟ್ಟಿಗೆ ಕಂಗ್ಲೀಷ್ ಆಗಿಬಿಟ್ಟಿದೆ. ಅವರು ಬಳಸುತ್ತಿರುವ ಇಂಗ್ಲೀಷ್ ಪದಗಳಿಗೆ ಬಹು ಕಾಲದಿಂದ ಪ್ರಚಲಿತವಾದ, ಪ್ರಸಿದ್ಧವಾದ ಕನ್ನಡ ಪದಗಳು ಖಂಡಿತ ಇವೆ. ಆದರೆ ಅವು ಗೊತ್ತಿರಲಿ, ಗೊತ್ತಿಲ್ಲದಿರಲಿ, ಮರೆತು ಹೋಗಿರಲಿ, ಅವುಗಳ ಬದಲಿಗೆ ಇಂಗ್ಲೀಷ್ ಪದಗಳನ್ನು ಬಳಸದಿದ್ದರೆ ಒಂದು ಸಣ್ಣ ಗೂಡಂಗಡಿಯಲ್ಲಿ ಸಹ ವ್ಯಾಪಾರ ಮಾಡುವುದು ಕಷ್ಟ ಎಂಬಂಥ ಪರಿಸ್ಥಿತಿ ಇಂದಿನ ಬೆಂಗಳೂರಿನಲ್ಲಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ದೊಡ್ಡ ದೊಡ್ಡ ಅಂಗಡಿಗಳಲ್ಲಂತೂ ಕನ್ನಡದಲ್ಲಿ ಮಾತಾಡುವುದು ಸಂಕೋಚದ, ಮುಜುಗರದ ಅನುಭವವನ್ನುಂಟು ಮಾಡುತ್ತದೆ. ಆದರೆ ಎಂಬ ಅತಿ ಸಾಮಾನ್ಯ ಕನ್ನಡ ಪದದ ಬದಲು ಬಟ್ ಎಂಬ ಇಂಗ್ಲೀಷ್ ಪದವನ್ನು ಸಾಹಿತಿಗಳೇ ಭಾಷಣಗಳಲ್ಲೂ ಬಳಸುತ್ತಾರೆ. ಇನ್ನು ಟಿ.ವಿ. ಧಾರಾವಾಹಿಗಳು, ರಿಯಾಲಿಟಿ ಶೋಗಳಲ್ಲಿ ಬಳಸುವ ಕಂಗ್ಲಿಷ್ ಬಗ್ಗೆ ಹೇಳುವುದೇ ಬೇಡ. ಇಂದು ರಿಕ್ಷಾ ಚಾಲಕರಿಗೆ ಎಡ, ಬಲ ಎಂದರೆ ಅರ್ಥವಾಗುವುದಿಲ್ಲ. ಲೆಫ್ಟ್, ರೈಟ್ ಎಂದರೆ ಮಾತ್ರ ಅರ್ಥವಾಗುತ್ತದೆ. ಅಂಗಡಿಯಲ್ಲಿ ಐದು ರೂಪಾಯಿ ಎಂದು ಹೇಳಿದರೆ ಫೈವ್ ರುಪೀಸಾ ಎಂಬ ಪ್ರತಿ ಪ್ರಶ್ನೆಯನ್ನು ನಾನು ಅನೇಕ ಬಾರಿ ಎದುರಿಸಿದ್ದುಂಟು.

ಹೀಗೆಂದ ಮಾತ್ರಕ್ಕೆ, ಇಂಗ್ಲೀಷ್ ಪದ ಬಳಸಲೇ ಬಾರದು, ಎಲ್ಲವನ್ನೂ ಕನ್ನಡದಲ್ಲೇ ಹೇಳಬೇಕೆಂಬ ವೀರ ಕನ್ನಡಿಗ ಆಂಡಯ್ಯ ಗೋತ್ರದವನು ನಾನಲ್ಲ. ಸೂಕ್ತ ಕನ್ನಡ ಪದವಿಲ್ಲದಿದ್ದರೆ ಇಂಗ್ಲೀಷ್ ಪದ ಬಳಸಬಾರದೆಂದು ಹೇಳುವುದಿಲ್ಲ. ಬಸ್ಸು, ಕಾರು, ರೈಲು, ಸೈಕಲ್ಲು, ಸ್ಕೂಟರ್, ಫೋನ್, ಕಂಪ್ಯೂಟರ್, ಫೇಸ್‌ಬುಕ್, ವಾಟ್ಸಪ್ ಅಂಥ ಪದಗಳನ್ನೂ ಕನ್ನಡಿಸಿ ಹೇಳಬೇಕೆಂಬ ಹಟಮಾರಿತನ ನನಗಿಲ್ಲ. ಆದರೆ ಕನ್ನಡ ಪದಗಳು ಪ್ರಚಲಿತವೂ ಪ್ರಸಿದ್ಧವೂ, ರೂಢಿಯಲ್ಲಿ ಆಗಿದ್ದರೂ ಅವುಗಳನ್ನು ತಿರಸ್ಕರಿಸಿ ಇಂಗ್ಲೀಷ್ ಪದಗಳನ್ನು ಬಳಸುವ ಅನಿವಾರ್ಯತೆ ಏನು? ಔಚಿತ್ಯವೇನು? ಒಂದು ಉದಾಹರಣೆ ನೀಡುವುದಾದರೆ ಕನ್ನಡದ ಹೆಸರನ್ನೇ ಹೊತ್ತಿರುವ ಪತ್ರಿಕೆಯೊಂದು ಅದು ಪ್ರಕಟವಾದ ದಿನವನ್ನು ಸನ್‌ಡೇ, ಮನ್‌ಡೇ ... ಎಂದು ಮುಖಪುಟದಲ್ಲೇ ಮುದ್ರಿಸುತ್ತದೆ. ಭಾನುವಾರ, ಸೋಮವಾರ ಎಂದು ಮುದ್ರಿಸಿದರೆ ಜನರಿಗೆ ಅರ್ಥವಾಗುವುದಿಲ್ಲವೇ? ಅದೂ ಅರ್ಥವಾಗದವರಿಗೆ

ಪತ್ರಿಕೆಯಲ್ಲಿರುವ ಇತರ ಕನ್ನಡ ಬರಹಗಳು ಅರ್ಥವಾಗುತ್ತವೆಯೇ? ಹಾಗೆ ಅರ್ಥವಾಗದಿದ್ದರೆ ಎಲ್ಲವನ್ನೂ ಇಂಗ್ಲೀಷಿನಲ್ಲೇ ಪ್ರಕಟಿಸಬಹುದಲ್ಲಾ?

ಇತ್ತೀಚೆಗೆ ನನ್ನ ಮಿತ್ರರೊಬ್ಬರು ಹೇಳಿದರು. ತಮಿಳುನಾಡಿನಲ್ಲಿ ತಮಿಳೇತರ ಹೆಸರುಗಳುಳ್ಳ ಚಲನಚಿತ್ರಗಳಿಗೆ ಸರಕಾರ (ಸಬ್ಸಿಡಿ) ಸಹಾಯಧನ ಕೊಡುವುದಿಲ್ಲವಂತೆ. ಆದರೆ ಕನ್ನಡನಾಡಿನಲ್ಲಿ ಯಾವುದೇ ಕನ್ನಡ ದಿನಪತ್ರಿಕೆಯ ಶುಕ್ರವಾರದ ಸಂಚಿಕೆ ನೋಡಿ. ಅಲ್ಲಿ ಕನ್ನಡ ಹೆಸರಿರುವ ಚಿತ್ರಗಳೇ ಅಪರೂಪ! ಕಿಂಗ್, ಸ್ಟೈಲ್‌ಕಿಂಗ್, ಟೈಗರ್, ಜಾಗ್ವಾರ್, ಮಾಸ್ಟರ್‌ಪೀಸ್, ಹ್ಯಾಪಿ ಬರ್ತ್‌ಡೇ, ಟೈಸನ್, ಸೈಕ್ಲೋನ್ ಮುಂತಾದ ಇಂಗ್ಲೀಷ್ ಹೆಸರುಗಳೇ ರಾರಾಜಿಸುತ್ತವೆ. ಅಷ್ಟೇ ಅಲ್ಲ ಆ ಹೆಸರುಗಳ ಅಡಿಯಲ್ಲಿ ಬರುವ ಬಾಲಂಗೋಚಿ (ಟ್ಯಾಗ್‌ಲೈನ್)ಗಳು ಇಂಗ್ಲೀಷಿನಲ್ಲಿರುತ್ತವೆ. ಇನ್ನು ನಾಯಕ ನಟರ ಬಿರುದಾವಳಿಗಳೂ ಅಷ್ಟೇ. ರಾಜ್‌ಕುಮಾರ್, ವಿಷ್ಣುವರ್ಧನ್ ಅವರು ನಟ ಸಾರ್ವಭೌಮ, ಸಾಹಸಸಿಂಹ ಎಂಬ ಬಿರುದನ್ನು ಸ್ವೀಕರಿಸಿದ್ದರು. ಆದರೆ ಈಗ ಕನ್ನಡ ನಟರಿಗೆ ಹ್ಯಾಟ್ರಿಕ್ ಹೀರೋ, ಚಾಲೆಂಜಿಂಗ್ ಸ್ಟಾರ್, ಗೋಲ್ಡನ್ ಸ್ಟಾರ್, ರಿಯಲ್ ಸ್ಟಾರ್, ರಾಕಿಂಗ್ ಸ್ಟಾರ್, ಫೈರಿಂಗ್ ಸ್ಟಾರ್ ಮುಂತಾದ ಇಂಗ್ಲೀಷ್ ಬಿರುದುಗಳೇ ಬೇಕು. ಆದಾಗ್ಯೂ ತಾವಿರುವುದೇ ಕನ್ನಡದ ಉದ್ಧಾರಕ್ಕಾಗಿ ಎಂದು ಕನ್ನಡ ಚಿತ್ರರಂಗದ ಪ್ರವೃತಿಗಳು ಆಗಾಗ ಘೋಷಿಸುತ್ತಲೇ ಇರುತ್ತಾರೆ. ರಾಜ್ಯ ಸರಕಾರವೂ ಅವರಿಗೆ ತೆರಿಗೆದಾರರ ಹಣದಿಂದ ಕೋಟಿಗಟ್ಟಲೆ ರೂಪಾಯಿ ಸಹಾಯಧನ ನೀಡುತ್ತಲೇ ಇದೆ. ಒಂದು ಕಾಲದಲ್ಲಿ ಸಹಾಯ ಧನದ ಮೊತ್ತ ರೂಪಾಯಿ ಐವತ್ತು ಸಾವಿರ ಆಗಿತ್ತು. ಆಗ ಕಲಾತ್ಮಕ ಅಥವಾ ಪ್ರಶಸ್ತಿ ಪಡೆದ ಚಿತ್ರಗಳಿಗಷ್ಟೇ ಅದು ಸಿಗುತ್ತಿತ್ತು. ಅನಂತರ ಚಿತ್ರೋದ್ಯಮದ ಒತ್ತಡ ಹೆಚ್ಚಿ, ಎಲ್ಲಾ ಚಿತ್ರಗಳಿಗೂ ಸಹಾಯಧನ ವಿಸ್ತರಿಸಿತು. ಅದರ ಮೊತ್ತವೂ ಹೆಚ್ಚುತ್ತಾ ಹೋಯಿತು. ಜೊತೆಗೇ ಚಿತ್ರಗಳ ಗುಣಮಟ್ಟವೂ ಕುಸಿಯುತ್ತಾ ಬಂತು. ಮನರಂಜನೆಯ ಹೆಸರಲ್ಲಿ ಕಾಮ, ಕ್ರೋಧ, ಸೇಡು, ಹಿಂಸೆ, ಅತ್ಯಾಚಾರ, ಹೊಡೆದಾಟ, ಕೊಲೆ ಮುಂತಾದ ದುಷ್ಟ ಪ್ರವೃತ್ತಿಗಳ ವೈಭವೀಕರಣ ಇಂದಿನ ಬಹುತೇಕ ಚಿತ್ರಗಳ ಸರ್ವಸ್ವವಾಗಿದೆ. ಇದರಲ್ಲಿ ಕಲೆಯಾಗಲೀ, ಸಂಸ್ಕೃತಿಯಾಗಲೀ, ಕನ್ನಡಾಭಿಮಾನ ವರ್ಧಿಸುವ ಅಂಶಗಳಾಗಲೀ ಸ್ವಲ್ಪವೂ ಇಲ್ಲ. ಚಲನಚಿತ್ರ ಇಂದು ಶುದ್ಧ ವ್ಯಾಪಾರೀ ಸರಕು ಮಾತ್ರ. ಅವುಗಳಿಂದ ಕನ್ನಡ ಉದ್ಧಾರವಾಗುತ್ತದೆ ಎಂಬ ಹೇಳಿಕೆಗೆ ವಾಸ್ತವದ ಆಧಾರ ಏನೂ ಇಲ್ಲ. ಅದೊಂದು ರೊಮ್ಯಾಂಟಿಕ್ ಕಲ್ಪನೆಯಷ್ಟೆ.

ರಾಜ್ಯಾದ್ಯಂತ ಪ್ರತಿವರ್ಷ ನವೆಂಬರ್ ತಿಂಗಳಿಡೀ ಕನ್ನಡ ರಾಜ್ಯೋತ್ಸವದ ಆಚರಣೆ ನಡೆಯುತ್ತದೆ. ನಡೆಯಲಿ, ಆ ಒಂದು ತಿಂಗಳಲ್ಲಾದರೂ ಕನ್ನಡದ ಸದ್ದು ಕೇಳಿಸುತ್ತಿರಲಿ. ಆದರೆ ಅಷ್ಟೇ ಸಾಲದು. ಕನ್ನಡನಾಡಿನ ರಾಜಧಾನಿಯಾಗಿರುವ ಬೆಂಗಳೂರಿನಲ್ಲಿಯೇ ಕನ್ನಡ ಕುಸಿದು ಹೋದರೆ ಅಮೇರಿಕದಲ್ಲೇ, ದುಬೈಯಲ್ಲೇ ಕನ್ನಡ ಸಮ್ಮೇಳನಗಳು ನಡೆದರೂ ಅದರ ಸಾರ್ಥಕ್ಯವೆಷ್ಟು? ಕನ್ನಡದಲ್ಲಿ ಪುಸ್ತಕಗಳು ಪ್ರಕಟವಾಗುತ್ತಿವೆ. ಆದರೆ ಓದುಗರ ಸಂಖ್ಯೆ

ಕಡಿಮೆಯಾಗುತ್ತಿದೆ. ಹೊಸ ತಲೆಮಾರಿನ ಯುವಕ-ಯುವತಿಯರು ಇಂಗ್ಲೀಷ್ ಪುಸ್ತಕಗಳನ್ನೋದುತ್ತಾರೆಯೇ ಹೊರತು ಕನ್ನಡವನ್ನಲ್ಲ. ಇತ್ತೀಚೆಗೆ ನನ್ನ ಪರಿಚಿತರೊಬ್ಬರು ತನ್ನ 20 ವರ್ಷದ ಮೊಮ್ಮಗನಿಗೆ ಭೈರಪ್ಪನವರ "ಪರ್ವ" ಕಾದಂಬರಿ ಓದಲು ಹೇಳಿದಾಗ ಆತ "ಅದರ ಇಂಗ್ಲೀಷ್ ವರ್ಶನ್ ಇದ್ದರೆ ಕೊಡಿ, ಓದುತ್ತೇನೆ" ಎಂದನಂತೆ. ಎಲ್ಲರೂ ಹೀಗೆಯೇ ಇದ್ದಾರೆ ಎಂದು ಸಾರಾಸಗಟು ತೀರ್ಮಾನಿಸಲಾಗದು. ಆದರೆ ಬಹುತೇಕ ಯುವ ಜನರು ಕನ್ನಡದ ಬಗ್ಗೆ ತೋರುವ ಮನೋಭಾವಕ್ಕೆ ಇದೊಂದು ದಿಕ್ಸೂಚಿ ಎನ್ನಬಹುದು. ಏಕೆಂದರೆ ಇದು ಇಂಗ್ಲೀಷ್ ಮಾಧ್ಯಮದ ಶಿಕ್ಷಣ ಬಲಿಷ್ಠವಾಗಿದೆ. ಕನ್ನಡ ಶಾಲೆಗಳು ಮುಚ್ಚುತ್ತಿವೆ ಅಥವಾ ಇಂಗ್ಲೀಷ್ ಮಾಧ್ಯಮಕ್ಕೆ ಮತಾಂತರಗೊಳ್ಳುತ್ತಿವೆ. ಸಾಮಾನ್ಯ ವಿದ್ಯಾರ್ಥಿಗಳಿಗೂ, ಅವರ ತಂದೆ-ತಾಯಿಗಳಿಗೂ ಭಾಷೆಗಿಂತ ಬದುಕನ್ನು ಕಟ್ಟಿಕೊಳ್ಳುವುದು ಮುಖ್ಯವಾಗಿರುವುದು ಸಹಜ ಪ್ರಕ್ರಿಯೆ. ಬದುಕು ಮೊದಲು, ಭಾಷೆ ಅನಂತರ, ಆದರೆ ತಮಿಳರಂತೆ, ತೆಲುಗರಂತೆ, ಮಲೆಯಾಳಿಗಳಂತೆ, ಕೊಂಕಣಿಗಳಂತೆ ಬದುಕಿಗೆ ಬೇಕಾದಷ್ಟು ಅನ್ಯ ಭಾಷೆಗಳನ್ನು ಕಲಿತರೂ ಮಾತೃಭಾಷೆಯನ್ನು ಮರೆಯದೆ ಅವಕಾಶವಿರುವಲ್ಲೆಲ್ಲ ಬಳಸಲು ಕನ್ನಡಿಗರಿಗೇಕೆ ಸಾಧ್ಯವಾಗುತ್ತಿಲ್ಲ? ಇನ್ನಾವುದೇ ಅನ್ಯಭಾಷಿಕರಲ್ಲಿ ಕಾಣದ ರೋಗ ಕನ್ನಡಿಗರಿಗೇಕೆ ಹಿಡಿದಿದೆ? ಐವತ್ತು ವರ್ಷಗಳಿಂದ ಬೆಂಗಳೂರಿನಲ್ಲಿ ವಾಸಿಸುತ್ತಿರುವ ಗೂರ್ಖನಿಗೂ ಒಂದೇ ಒಂದು ಶಬ್ದ ಕನ್ನಡ ಕಲಿಯದೆ ಇಲ್ಲಿ ಬೇರೆಲ್ಲರಂತೆ ಬದುಕಬಹುದು. ಏಕೆಂದರೆ ಕನ್ನಡಿಗರಷ್ಟು ಸಹಿಷ್ಣುತೆ ಇರುವವರು ಯಾರೂ ಇಲ್ಲ!

"ಕನ್ನಡಕೆ ಹೋರಾಡು ಕನ್ನಡದಕಂದ" ಎಂಬ ಕುವೆಂಪು ಕವನದ ಸಾಲಿಗೆ ಹನಿಕವಿ ಡುಂಡಿರಾಜರು ಸೇರಿಸಿದ "ಕನ್ನಡವ ಕಾಪಾಡು ಕನ್ನಡಿಗರಿಂದ" ಎಂಬ ಸಾಲು ಬೆಂಗಳೂರಿನಲ್ಲಂತೂ ನೂರಕ್ಕೆ ನೂರು ಸತ್ಯ. ಮುಂದೆ ಕನ್ನಡ ಉಳಿದರೆ ಅದು ಬೆಂಗಳೂರಿನ ಹೊರಗಿರುವ ಕನ್ನಡಿಗರಿಂದ ಮಾತ್ರವೇ ಉಳಿದೀತು.

# ಡಾ| ಶಿವರಾಮ ಕಾರಂತ

(10-10-1902 - 09-12-1997)

– ಬಾ.ಕಿ.ನ.

(ಗಾಂಧಿ ಬಜಾರ್ ಪತ್ರಿಕೆಯ ಅಕ್ಟೋಬರ್ 2014 ಸಂಚಿಕೆಯಿಂದ)

"ನನ್ನ ಜೀವನದ ಹಿನ್ನಲೆಯನ್ನು ತಿಳಿದಾಗಲೆಲ್ಲ ನಾನು ನನ್ನ ಸುತ್ತಣ ಜನರಿಗೆ, ನನ್ನ ಹಿಂದೆ ಸಂದು ಹೋದವರಿಗೆ, ಅವರೆಲ್ಲರನ್ನೂ ಮತ್ತು ನನ್ನನ್ನೂ ಹೊತ್ತು ಸಾಗಿಸುತ್ತಿರುವ ಈ ಜಗತ್ತಿಗೆ ಅಡಿಗಡಿಗೂ ಋಣಿ ಎನಿಸುತ್ತದೆ. ಆ ಪೂರ್ವಿಕರು, ಇಂದಿನ ಸಮಕಾಲೀನರು ತಮ್ಮ ತಮ್ಮ ಅನುಭವ, ತಿಳಿವು, ಚಿಂತನೆಗಳನ್ನು ನಮಗೆ ದೊರಕಿಸದೆ ಹೋಗುತ್ತಿದ್ದರೆ ನಾವು ಇಷ್ಟೆಲ್ಲ ಸುಖ-ಸಂತಸಗಳನ್ನು ಪಡೆಯುವುದು ಸಾಧ್ಯವಾಗದು ಎಂದು ಹೆಜ್ಜೆ ಹೆಜ್ಜೆಗೂ ಅನಿಸುತ್ತದೆ. ನನ್ನನ್ನು ಸದಾ ಕಾಡುತ್ತಿರುವ ಯೋಚನೆಗಳಲ್ಲಿ ನಾನು ಎಷ್ಟೆಲ್ಲ ಜನರಿಗೆ ಋಣಿಯಾಗಿದ್ದೇನೆ, ಅದನ್ನು ಒಂದಲ್ಲ ಒಂದು ರೀತಿಯಿಂದ ನಾನು ಸಲ್ಲಿಸದೆ ಹೋದರೆ ನಾನು ಬದುಕಿ ಫಲವೇನು ಎಂದು ಅನಿಸುವುದರಿಂದಲೇ, ನನ್ನ ಬರವಣಿಗೆಗಳು ಸಾಧ್ಯವಾಗಿವೆ ಎಂದು ಕಾರಂತರು ತಾವಾಗಿಯೇ ಬರೆದುಕೊಂಡಿದ್ದಾರೆ.

ಕಾರಂತರಿಗೆ ಹತ್ತು ಮುಖಗಳು. ಅವರೇ ಒಂದು ಕಡೆ ಬರೆದುಕೊಂಡಂತೆ ಸ್ಮೃತಿ ಪಟಲದಿಂದ ಎಂಬ ಅವರ ಆತ್ಮಕಥನವನ್ನು ಪ್ರಕಟಿಸಿದ್ದಾರೆ.

ಕಾರಂತರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಕೋಟ ಎಂಬ ಗ್ರಾಮದಲ್ಲಿ. ಅವರ ಮೂವರು ಅಣ್ಣಂದಿರೂ ಪ್ರಸಿದ್ಧರು. ಅವರ ಮೊದಲ ಕಾದಂಬರಿ ಒಂದು ಪತ್ತೇದಾರಿ ಕಥೆ. ಕಾರಂತರು ತಮ್ಮ ಸ್ವಂತ ಊರನ್ನು ಬಿಟ್ಟು ಪುತ್ತೂರಿನಲ್ಲಿ ಬಂದು ಬಾಲವನ ಸ್ಥಾಪಿಸಿ ಅಲ್ಲಿಯೇ ನೆಲೆಸಿದರು. ಅವರಿಗೆ ಊರೂರು ಅಲೆದಾಡುವುದೆಂದರೆ ತುಂಬಾ ಪ್ರಿಯವಾದ ಹವ್ಯಾಸ. ಈ ಅಲೆದಾಟದ ಹುಮ್ಮಸ್ಸಿನಿಂದ "ಅಬೂವಿನಿಂದ ಬರಾಮಕ್ಕೆ", 'ಅಪೂರ್ವ ಪಶ್ಚಿಮ', 'ಚಾಲುಕ್ಯ ವಾಸ್ತುಶಿಲ್ಪ', 'ಪಾತಾಳಕ್ಕೆ ಪ್ರಯಾಣ', 'ಚಿತ್ರಮಯ ದಕ್ಷಿಣ ಕನ್ನಡ' ಮುಂತಾದ ಕೃತಿಗಳನ್ನು ಪ್ರಕಟಿಸಿದರು.

ಕಾರಂತರು ಮತ್ತು ಕುವೆಂಪು ನಮ್ಮ ಶ್ರೇಷ್ಠ ಕಾದಂಬರಿಕಾರರಲ್ಲಿ ಮೊದಲಿಗರು. ನಮ್ಮ ಮೊದಲ ಕಾದಂಬರಿಕಾರರು. ಸಶಕ್ತ ಕಥೆಯಿಂದ ಹಲವಾರು ಸಮಸ್ಯೆಗಳನ್ನು ಕಥಾಹಂದರದಲ್ಲಿ ತಮ್ಮದೇ ದೃಷ್ಟಿಯಿಂದ ಕಟ್ಟಿಕೊಟ್ಟ ಸಾಮಾಜಿಕ ಕಳಕಳಿಯುಳ್ಳ ಲೇಖಕರು. ಚೋಮನದುಡಿ, ಮರಳಿ ಮಣ್ಣಿಗೆ, ಬೆಟ್ಟದ ಜೀವ, ಅಳಿದ ಮೇಲೆ, ಮೂಕಜ್ಜಿಯ ಕನಸುಗಳು, ಮೈಮನಗಳ ಸುಳಿಯಲ್ಲಿ ಮುಂತಾದ ಕಾದಂಬರಿಗಳು ಪ್ರಸಿದ್ಧವಾದವು. ದಕ್ಷಿಣ ಕನ್ನಡ ಜಿಲ್ಲೆಯ ವಿಶೇಷವಾದ ಯಕ್ಷಗಾನ ಬಯಲಾಟದ ಬಗ್ಗೆ ಅಧ್ಯಯನ ಮಾಡಿ ತಾವೇ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿದವರು. ಅವರು ನೃತ್ಯಾಭ್ಯಾಸವನ್ನೂ ಮಾಡಿದ್ದರು. ಅವರ

ಶಿಷ್ಯೆಯಾದ ಲೀಲಾ ಅವರ್ನೇ ಬಾಳ ಗೆಳತಿಯಾಗಿ ಸ್ವೀಕರಿಸಿದರು. ಅವರು ನಡೆದದ್ದೇ ಹೆದ್ದಾರಿ. ಸಮಾಜದ ಕಟ್ಟುಪಾಡುಗಳನ್ನು ಕಿತ್ತೆಸೆದರು. ಪುತ್ತೂರಿನಲ್ಲಿ ಬಾಲವನ ಕಟ್ಟಿಕೊಂಡು ಬಾಳಿದರು. ಕಾರಂತರಿಗೆ ಪಂಪ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಮುಂತಾದ ಅನೇಕ ಪ್ರಶಸ್ತಿಗಳು ಲಭಿಸಿದೆ.

ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿಯೂ ಅವರಿಗೆ ಸಂದಿದೆ. 1955ರಲ್ಲಿ ಮೈಸೂರಿನಲ್ಲಿ ನಡೆದ 37ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕಾರಂತರು ಪರಿಸರವಾದಿಗಳಾಗಿ ಕೈಗಾ ಅಣು ಸ್ಥಾವರದ ವಿರುದ್ಧ ಹೋರಾಟ ನಡೆಸಿದರು. ಪ್ರಕೃತಿ ಪ್ರೇಮಿಯಾದ ಕಾರಂತರು ಪ್ರಕೃತಿಯ ಕಾಳಜಿಯನ್ನು ವಹಿಸಿದವರಲ್ಲಿ ಪ್ರಮುಖರು. ನಿರಂತರವಾಗಿ ಸಾಮಾಜಿಕ ಪಿಡುಗುಗಳ ಬಗ್ಗೆ ಧ್ವನಿ ಎತ್ತಿದವರು. ಪರಿಸರ ಪ್ರೇಮಿಯಾದ ಕಾರಂತರು ಈ ಪ್ರಕೃತಿ ನಮ್ಮೆಲ್ಲರ ತಾಯಿಯೆಂದು ಅದನ್ನು ಕಾಪಾಡುವ ಚಳುವಳಿಗಳಲ್ಲೂ ಭಾಗಿಯಾದರು. ಅವರ ಪ್ರಸಿದ್ಧ ಕಾದಂಬರಿ ಚೋಮನ ದುಡಿ ದಲಿತರ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತ ಅವರ ಸಾಮಾಜಿಕ ಕಳಕಳಿಯ ಧ್ವನಿಯನ್ನು ಗಟ್ಟಿಯಾಗಿಸಿದೆ.

ಕಾರಂತರು ತಮ್ಮ ಬಾಲವನದಲ್ಲಿ ಹರ್ಷ ಮುದ್ರಣಾಲಯವನ್ನು ನಡೆಸಿಕೊಂಡು ಬಂದರು. ಅವರ ಕೆಲವು ಕಾದಂಬರಿಗಳನ್ನು ಅವರೇ ಮುದ್ರಿಸಿ ಪ್ರಕಟಿಸಿದರು. ಕೊನೆಗೆ ತಮ್ಮ ಪ್ರೆಸ್‌ನ್ನು ಸ್ಥಗಿತಗೊಳಿಸಿ ಮಾರಾಟಕ್ಕೆ ಜಾಹೀರಾತು ಕೊಟ್ಟಿದ್ದರು. ನಾನು ಇದನ್ನು ನೋಡಿ ಅವರಿಗೊಂದು ಪತ್ರವನ್ನು ಬರೆದು ಮುದ್ರಣ ಯಂತ್ರವನ್ನು ಖರೀದಿಸುವ ಬಗ್ಗೆ ಕೋರಿಕೆ ಇಟ್ಟಿದ್ದೆ. ಕಾರಂತರ ಪರಿಚಯವಿದ್ದ ನನಗೆ ಮರುತ್ತರ ನೀಡಿದರು. ಅವರದೊಂದು ಅಂಚೆಕಾರ್ಡು ನನಗೆ ಬಂತು. ನನ್ನ ಪ್ರೆಸ್ಸಿನಲ್ಲಿ ಒಂದು ಸಿಲಿಂಡರ್ ಯಂತ್ರ ಇದೆ. ನಾನು ಅದನ್ನು ಬೇರೆಯವರಿಂದ ಕೊಂಡುಕೊಂಡಿದ್ದು ಸಾಕಷ್ಟು ಸುಸ್ಥಿತಿಯಲ್ಲಿದೆ. ನನ್ನ ಅಳಿದ ಮೇಲೆ ಪುಸ್ತಕವನ್ನು ಮುದ್ರಿಸಿದೆ. ಈಗ ಕೆಲಸಗಾರರ ಸಮಸ್ಯೆಯಿಂದ ಅದನ್ನು ಮಾರುವವನಿದ್ದೇನೆ. ಅದರ ಬೆಲೆ ಸ್ಥಳದಲ್ಲಿ ಹನ್ನೊಂದು ಸಾವಿರ ನಿಮಗೆ ಬೇಕಿದ್ದರೆ ಬಂದು ನೋಡಿ ತೆಗೆದುಕೊಳ್ಳಬಹುದು ಎಂದು ಹೇಳಿದರು.

ಈ ಮೊದಲೇ ನನಗೆ ಕೆ.ವಿ. ಸುಬ್ಬಣ್ಣನವರ ಯಕ್ಷಗಾನ ಕಾರ್ಯಾಗಾರದಲ್ಲಿ ಅವರ ಪರಿಚಯವಿತ್ತು. ನಾನು ಒಂದು ದಿನ ಬಸ್ ಹತ್ತಿಕೊಂಡು ಪುತ್ತೂರಿಗೆ ಹೊರಟೇ ಬಿಟ್ಟೆ. ಸಂಜೆಯಾಗಿದ್ದರಿಂದ ಪುತ್ತೂರಿನ ಹೋಟೆಲೊಂದರಲ್ಲಿ ರೂಂ ಮಾಡಿ ಅವರ ಮನೆಕಡೆ ಹೋಗಿದ್ದೆ. ಅವರು ನನ್ನನ್ನು ಸ್ವಾಗತಿಸಿ ಸುಖ-ದುಃಖ ವಿಚಾರಿಸಿಕೊಂಡರು. ಹೋಟೆಲಿನಲ್ಲಿ ರೂಂ ಮಾಡಿದ್ದಕ್ಕೆ ಬೇಸರಪಟ್ಟು ನನ್ನ ಮನೆಯಲ್ಲಿರಲು ಸಂಕೋಚವೇಕೆ ಎಂದು ತಕ್ಷಣ ಅವರ ಕಾರಿನ ಚಾಲಕನಿಗೆ ಹೇಳಿ ನನ್ನ ಹೋಟೆಲಿನಿಂದ ಅವರ ಮನೆಗೆ ಬರುವ ಏರ್ಪಾಟು ಮಾಡಿದರು. ಅವರ ಕಾರ್ ಚಾಲಕ ಆನಂದನಿಗೆ ಈ ಬಗ್ಗೆ ಸೂಚನೆಯನ್ನು ಕೊಟ್ಟರು. ಆತ ನನ್ನನ್ನು ಹೋಟೆಲಿಗೆ ಕರೆದೊಯ್ದು ಅದರ ಮಾಲೀಕರಿಗೆ "ಇವರು ಕಾರಂತರ ಅತಿಥಿ. ರೂಂ ಖಾಲಿ ಮಾಡಿ ಬಿಡಿಸಿಕೊಂಡು ಬರಲು ಹೇಳಿದ್ದಾರೆ" ಎಂದು ಲಾಡ್ಜ್‌ನವನಿಗೆ ಹೇಳಿದ ತಕ್ಷಣ

ಅವರು ನಾನು ಕೊಟ್ಟ ಅಡ್ವಾನ್ಸ್ ಹಿಂದಕ್ಕೆ ಕೊಟ್ಟು ನನ್ನ ಸೂಟ್‌ಕೇಸನ್ನು ಕೊಟ್ಟು ಕಳುಹಿಸಿದರು. ನಾನು ಕಾರಂತರ ಕ್ಷಮೆ ಕೇಳಿ ಅವರ ಮನೆಯಲ್ಲಿಯೇ ಉಳಿದುಕೊಂಡೆ. ಮರುದಿನ ಅವರ ಮುದ್ರಣ ಯಂತ್ರ ನೋಡಿ ಖರೀದಿಗೆ ಒಪ್ಪಿಕೊಂಡು ಮತ್ತೆ ಹಣದ ಚೆಕ್ ತಂದುಕೊಟ್ಟು ತೆಗೆದುಕೊಂಡು ಹೋಗುವುದಾಗಿ ಹೇಳಿದೆ. ಕಾರಂತರು "ನಿಮಗೆ ಹಣದ ತೊಂದರೆಯಾದರೆ ಸಿಂಡಿಕೇಟ್ ಬ್ಯಾಂಕಿನವರಿಗೆ ಹೇಳಿ ಸಾಲದ ವ್ಯವಸ್ಥೆ ಮಾಡೋಣ" ಎಂದರು. ಅವರಿಗೆ ಅವರ ಒಂದೆರಡು ಪುಸ್ತಕ ಮುದ್ರಿಸಿಕೊಟ್ಟದ್ದಕ್ಕೆ ನನ್ನ ಮೇಲೆ ಪ್ರೀತಿಯಿತ್ತು. ನಾನು ಹಣದ ಬಗ್ಗೆ ಬ್ಯಾಂಕ್ ಲೋನ್ ತೆಗೆದುಕೊಂಡಿದ್ದೇನೆ. ಮತ್ತೆರಡು ದಿನಗಳಲ್ಲಿ ಬಂದು ಹಣ ಪಾವತಿಸಿ ಕೊಂಡೊಯ್ಯುತ್ತೇನೆ ಎಂದು ತಿಳಿಸಿದೆ. ಅಂದು ನಡುರಾತ್ರಿಯ ತನಕ ಅವರು ಮುದ್ರಣ, ಪುಸ್ತಕ ಪ್ರಕಟಣೆ, ಮುಖ ಪುಟಕ್ಕಾಗಿ ಲಿನೋಲಿಯಂ ಹಾಳೆಗಳಿಂದ ಚಿತ್ರವನ್ನು ಅಚ್ಚಿಸಿ ಮುದ್ರಿಸುವ ಅವರ ಸಾಹಸವನ್ನು ವಿಸ್ತಾರವಾಗಿ ಹೇಳಿಕೊಟ್ಟರು. ಕೊನೆಗೆ ನಾನು ನಾಲ್ಕು ದಿನ ಬಿಟ್ಟು ಬಂದಾಗ ಕಾರಂತರು ತಮ್ಮ ಸುತ್ತಾಟಕ್ಕೆ ಹೊರಟು ಹೋಗಿದ್ದರು. ಆದರೆ ಅವರ ಶಿಷ್ಯ ಆನಂದನಿಗೆ ನನಗೆ ಬೇಕಾದ ಲಾರಿ ಗೊತ್ತುಮಾಡಿ, ಯಂತ್ರವನ್ನು ಪ್ಯಾಕ್ ಮಾಡಿ ಕೊಂಡೊಯ್ಯಲು ಎಲ್ಲ ಅನುಕೂಲಗಳನ್ನೂ ಮಾಡಿಕೊಡುವಂತೆ ಹೇಳಿದ್ದರು. ಕಾರಂತರೊಂದಿಗೆ ಕಳೆದ ಆ ದಿನಗಳ ನೆನಪುಗಳು ಹಸಿರಾಗಿದೆ. ಈ ಹಿಂದೆಯೇ ಅವರ ಬಗ್ಗೆ ನನ್ನ ಒಡನಾಟದ ಕ್ಷಣಗಳನ್ನು ದಾಖಲಿಸಿದ್ದೆ. ಕಾರಂತರು ನನ್ನ ಮುದ್ರಣ ಕಲೆಯ ಒಲವನ್ನು ನೋಡಿ ಮೆಚ್ಚಿಕೊಂಡವರು. ಈ ಬಗ್ಗೆ ಹಿಂದೊಮ್ಮೆ ಬರೆದಿದ್ದರೂ ನೆನಪಾದಾಗಲೆಲ್ಲ ಕಾರಂತರ ಮೇರು ವ್ಯಕ್ತಿತ್ವದ ಹಿರಿಮೆ-ಗರಿಮೆಯ ಮೆಲುಕಾಡುತ್ತೇನೆ. ಈ ದಿನಚರಿಯ ಪುಸ್ತಕರೂಪ ಬರುವಾಗ ಇನ್ನಷ್ಟು ಬರೆಯುತ್ತೇನೆ. ಕಾರಂತರ ಜೀವನವೇ ಒಂದು ತೆರೆದ ಪುಸ್ತಕ. ಕಾರಂತರು ಖಾರವಂತರಲ್ಲ. ಅವರ ಮನಸ್ಸು ತೆರೆದ ಪುಸ್ತಕ. ಪ್ರಕೃತಿಯ ಒಡನಾಡಿಯಾದ ಕಾರಂತರ ಜೀವನವೇ ಒಂದು ಅನುಕರಣೀಯ, ಇತರರಿಗೆ ಅನುಕರಣೀಯವಾಗಿದೆ.

**ಶಿಶುಗೀತೆ**

## ಚಿಟ್ಟೆ

ಚಿಟ್ಟೆ, ಚಿಟ್ಟೆ
ಹಾರುತ ಹಾರುತ
ನನ್ನೆಡೆ ಬಂದು ಬಿಟ್ಟೆ

ಆಹಾ, ಏನು ಸೊಗಸುಗಾರ್ತಿ
ಎಲ್ಲೆಡೆ ಹರಡಿದೆ ನಿನ್ನಯ ಕೀರ್ತಿ

ಆಹಾ, ಆಹಾ, ಎಷ್ಟು ವರ್ಷ
ಮಾಡಿದೆ ನಿನ್ನ ಪ್ರತೀಕ್ಷೆ

ನಿನ್ನೆಡೆ ಬಂದೆನು
ಹಾರಿ ಹಾರಿ ನನ್ನನ್ನು ನೀನು
ದಣಿಸಿಬಿಟ್ಟೆ

ಬೆಳೆದನು ನಾನು ಹೂವನು
ನೀ ಬಂದು ಕೂತು ಬಿಟ್ಟೆ
ಓಹೋ ಓಹೋ ತಿಳಿಯಿತು ಈಗ
ಆನಂದದ ಬೆನ್ನಟ್ಟಿ

ನಡೆದರೆ ಸಿಗದು
ಬೆಳೆಯಲು ಬೇಕು
ಹೂವಿನ ತೋಟ,
ಬಾಯ್ ಬಾಯ್ ಬಾಯ್

– ಪಾ.ಚಂ. ಚಡಗ




ಶಿವರಾಮ ಕಾರಂತ ವೇದಿಕೆ, ಸಾಸ್ತಾನ ಶಾಖೆ ಮತ್ತು ರೋಟರಿ ಕ್ಲಬ್, ಹಂಗಾರಕಟ್ಟೆ ಸಾಸ್ತಾನ ಇವರ ವತಿಯಿಂದ ನಡೆದ ಡಾ। ಶಿವರಾಮ ಕಾರಂತರ ನೆನಪಿನಲ್ಲಿ ಯಕ್ಷಗಾನದ ಕುರಿತು ವಿಚಾರ ಸಂಕಿರಣ ಮತ್ತು ಕಮಲಶಿಲೆ ಮೇಳದವರ ಯಕ್ಷಗಾನ ಪ್ರದರ್ಶನದ ಸಂದರ್ಭದಲ್ಲಿ ಪ್ರೊ ಎಂ.ಎಲ್. ಸಾಮಗರು ಉಪನ್ಯಾಸ ನೀಡುತ್ತಿರುವುದು.




ಶಿವರಾಮ ಕಾರಂತ ವೇದಿಕೆ, ಸಾಸ್ತಾನ ಶಾಖೆ ಮತ್ತು ರೋಟರಿ ಕ್ಲಬ್, ಹಂಗಾರಕಟ್ಟೆ ಸಾಸ್ತಾನ ಇವರ ವತಿಯಿಂದ ನಡೆದ ಡಾ। ಶಿವರಾಮ ಕಾರಂತರ ನೆನಪಿನಲ್ಲಿ ಯಕ್ಷಗಾನದ ಕುರಿತು ವಿಚಾರ ಸಂಕಿರಣ ಮತ್ತು ಕಮಲಶಿಲೆ ಮೇಳದವರ ಯಕ್ಷಗಾನ ಪ್ರದರ್ಶನದ ಸಂದರ್ಭದಲ್ಲಿ ಡಾ। ನಾ. ಮೊಗಸಾಲೆಯವರನ್ನು ಅಭಿನಂದಿಸಲಾಯಿತು.

